ಅಧಿಸೂಚನೆ ಸಂಖ್ಯೆ: ರಾಚುಆ.42.ಇಜಿಪಿ.2015 ರಲ್ಲಿ ನಿರ್ದಿಷ್ಟಪಡಿಸಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲಾಗಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ: ಇಎಲ್‌ಎನ್(ಪಂ)ಸಿಆರ್.29/2014–15 ದಿನಾಂಕ: 07–04–2015 ರಲ್ಲಿ ನೆಲಮಂಗಲ ತಾಲ್ಲೂಕಿನ ಹನುಮಂತಪುರ ಎಂಬ ಒಂದೇ ಹೆಸರಿನ ಎರಡು ಗ್ರಾಮಗಳು ಬೇರೆ ಬೇರೆ ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿದ್ದು ಜನಸಂಖ್ಯೆ ಅದಲು ಬದಲಾಗಿರುವ ಕಾರಣ ಸದರಿ ಗ್ರಾಮ ಪಂಚಾಯತಿಗಳ ಸದಸ್ಯ ಸ್ಥಾನಗಳ ಸಂಖ್ಯೆಯಲ್ಲಿ ವ್ಯತ್ಯಾಸವಾಗುತ್ತಿರುವುದರಿಂದ ತಿದ್ದುಪಡಿ ಮಾಡಿಕೊಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಗ್ರಾಮ ಪಂಚಾಯತಿಗಳಲ್ಲಿ ಜನಸಂಖ್ಯೆ ವ್ಯತ್ಯಾಸವಾಗಿರುವ ಬಗ್ಗೆ ತಿಳಿಸಿ ಪರಿಷ್ಕೃತ ಜನಸಂಖ್ಯೆ ಅಂಕಿ ಅಂಶಗಳನ್ನು ನೀಡಿರುತ್ತಾರೆ. ಅದರಂತೆ ಆಯೋಗವು ದಿನಾಂಕ: 08–04–2015 ರ ಅಧಿಸೂಚನೆಗೆ ಈ ಕೆಳಕಂಡ ಕೋಷ್ಟಕ–1 ರ ಕಾಲಂ (2) ರಲ್ಲಿ ನಮೂದಿಸಿರುವ ಗ್ರಾಮ ಪಂಚಾಯತಿಗೆ ಒಟ್ಟು ಸದಸ್ಯರ ಸಂಖ್ಯೆಯನ್ನು ಕಾಲಂ(3) ರಲ್ಲಿ ನಮೂದಿಸಿದಂತೆ ತಿದ್ದುಪಡಿ ಮಾಡಿದೆ.

**ಕೋಷ್ಟಕ–1**

**ತಾಲ್ಲೂಕು : ನೆಲಮಂಗಲ**

| ದಿನಾಂಕ: 08–04–2015 ರ ಅಧಿಸೂಚನೆಯಲ್ಲಿದ್ದಂತೆ ಕ್ರಮ ಸಂಖ್ಯೆ | ಗ್ರಾಮ ಪಂಚಾಯತಿ ಹೆಸರು | ಒಟ್ಟು ಸದಸ್ಯರ ಸಂಖ್ಯೆ |
|---|---|---|
| 1 | 2 | 3 |
| 14 | ಮರಳಕುಂಟೆ | 14 |
| 21 | ಕುಲುವನಹಳ್ಳಿ | 19 |

ಆದೇಶಾನುಸಾರ
**ಆರ್. ಚಂದ್ರಶೇಖರ್**
ಅಧೀನ ಕಾರ್ಯದರ್ಶಿ
ರಾಜ್ಯ ಚುನಾವಣಾ ಆಯೋಗ

# ವಿಶೇಷ ರಾಜ್ಯ ಪತ್ರಿಕೆ

| ಭಾಗ– III | ಬೆಂಗಳೂರು, ಶನಿವಾರ, ಏಪ್ರಿಲ್ ೧೮, ೨೦೧೫ (ಚೈತ್ರ ೨೮, ಶಕ ವರ್ಷ ೧೯೩೭) | ನಂ. ೩೪೦ |
|---|---|---|
| Part– III | Bangalore, Saturday, April 18, 2015 (Chaithra 28, Shaka Varsha 1937) | No. 340 |

**ರಾಜ್ಯ ಚುನಾವಣಾ ಆಯೋಗ, ಕರ್ನಾಟಕ**

**ಕೆ.ಎಸ್.ಸಿ.ಎಂ.ಎಫ್. ಕಟ್ಟಡ (ಹಿಂಭಾಗ), ನಂ.8, 1ನೇ ಮಹಡಿ, ಕನ್ನಿಂಗ್‌ಹ್ಯಾಂ ರಸ್ತೆ, ಬೆಂಗಳೂರು–52**

**ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ : ರಾಚುಆ.70.ಇಜಿಪಿ.2015 ದಿನಾಂಕ: 18-04-2015**

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 5 ಉಪ ಪ್ರಕರಣ (1) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ **ಕೊಪ್ಪಳ** ಜಿಲ್ಲೆಯ ಗ್ರಾಮ ಪಂಚಾಯತಿಗಳಿಗೆ 2011 ರ ಜನಗಣತಿಯ ಜನಸಂಖ್ಯೆಯಂತೆ ಸದಸ್ಯ ಸ್ಥಾನವನ್ನು ನಿರ್ದಿಷ್ಟಪಡಿಸಿ ಹೊರಡಿಸಿರುವ ಅಧಿಸೂಚನೆ ಸಂಖ್ಯೆ: ರಾಚುಆ.70.ಇಜಿಪಿ.2015 ದಿನಾಂಕ: 01–04–2015 ನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲಾಗಿದೆ. ಜಿಲ್ಲಾಧಿಕಾರಿಗಳು ತಮ್ಮ ಪತ್ರದ ಸಂಖ್ಯೆ: ಕಂದಾಯ/ಚುನಾವಣೆ/40/2014–15 ದಿನಾಂಕ: 06–04–2015 ರ ಪತ್ರದಲ್ಲಿ ಯಲಬುರ್ಗಾ ತಾಲ್ಲೂಕಿನ ಈ ಕೆಳಕಂಡ ಗ್ರಾಮ ಪಂಚಾಯತಿಗಳಲ್ಲಿ ತಿದ್ದುಪಡಿಯಾಗಬೇಕಾದ ಗ್ರಾಮ ಪಂಚಾಯತಿ ಹೆಸರು ನಮೂದಿಸಿ ಕಳುಹಿಸಿರುತ್ತಾರೆ. ಆದುದರಿಂದ ಆಯೋಗವು ದಿನಾಂಕ: 01–04–2015 ರ ಅಧಿಸೂಚನೆಗೆ ಈ ಕೆಳಕಂಡ ಕೋಷ್ಟಕ–1 ರ ಕಲಂ(3) ರಲ್ಲಿ ನಮೂದಿಸಿದಂತೆ ತಿದ್ದುಪಡಿ ಮಾಡಿದೆ ಹಾಗೂ ಕೋಷ್ಟಕ–2 ರ ಕಲಂ(2) ರಲ್ಲಿ ನಮೂದಿಸಿರುವ ಗ್ರಾಮ ಪಂಚಾಯತಿಗಳ ಹೆಸರನ್ನು ಕಲಂ(3) ರಲ್ಲಿ ನಮೂದಿಸಿದಂತೆ ತಿದ್ದುಪಡಿ ಮಾಡಿದೆ.

**ಕೋಷ್ಟಕ–1**

**ತಾಲ್ಲೂಕು : ಯಲಬುರ್ಗಾ**

| ದಿನಾಂಕ: 01–04–2015 ರ ಅಧಿಸೂಚನೆಯಲ್ಲಿದ್ದಂತೆ ಕ್ರಮ ಸಂಖ್ಯೆ | ದಿನಾಂಕ: 01–04–2015 ರ ಅಧಿಸೂಚನೆಯಲ್ಲಿದ್ದಂತೆ ಗ್ರಾಮ ಪಂಚಾಯತಿ ಹೆಸರು | ತಿದ್ದುಪಡಿಯಂತೆ ಗ್ರಾಮ ಪಂಚಾಯತಿ ಹೆಸರು |
|---|---|---|
| 1 | 2 | 3 |
| 35 | ವಟಪರ್ವಿ | ನೆಲಜೇರಿ |
| 36 | ಚಿಕ್ಕಮನ್ನಾಪೂರ | ಬೋದೂರ |

ಆದೇಶಾನುಸಾರ
**ಆರ್. ಚಂದ್ರಶೇಖರ್**
ಅಧೀನ ಕಾರ್ಯದರ್ಶಿ
ರಾಜ್ಯ ಚುನಾವಣಾ ಆಯೋಗ

# ವಿಶೇಷ ರಾಜ್ಯ ಪತ್ರಿಕೆ

| ಭಾಗ– III<br>Part– III | ಬೆಂಗಳೂರು, ಶನಿವಾರ, ಏಪ್ರಿಲ್ ೧೮, ೨೦೧೫ (ಚೈತ್ರ ೨೮, ಶಕ ವರ್ಷ ೧೯೩೭)<br>Bangalore, Saturday, April 18, 2015 (Chaithra 28, Shaka Varsha 1937) | ನಂ. ೩೪೧<br>No. 341 |
|---|---|---|

**ರಾಜ್ಯ ಚುನಾವಣಾ ಆಯೋಗ, ಕರ್ನಾಟಕ**

ಕೆ.ಎಸ್.ಸಿ.ಎಂ.ಎಫ್. ಕಟ್ಟಡ (ಹಿಂಭಾಗ), ನಂ.8, 1ನೇ ಮಹಡಿ, ಕನ್ನಿಂಗ್‌ಹ್ಯಾಂ ರಸ್ತೆ, ಬೆಂಗಳೂರು–52

**ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ : ರಾಚುಆ.45.ಇಜಿಪಿ.2015 ದಿನಾಂಕ: 18-04-2015**

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 5 ಉಪ ಪ್ರಕರಣ (1) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಚಿಕ್ಕಬಳ್ಳಾಪುರ ಜಿಲ್ಲೆಯ ಗ್ರಾಮ ಪಂಚಾಯತಿಗಳಿಗೆ 2011 ರ ಜನಗಣತಿಯ ಜನಸಂಖ್ಯೆಯಂತೆ ಸದಸ್ಯ ಸ್ಥಾನವನ್ನು ದಿನಾಂಕ: 08–04–2015 ರ ಅಧಿಸೂಚನೆ ಸಂಖ್ಯೆ: ರಾಚುಆ.50.ಇಜಿಪಿ.2015 ರಲ್ಲಿ ನಿರ್ದಿಷ್ಟಪಡಿಸಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲಾಗಿದೆ. ಚಿಕ್ಕಬಳ್ಳಾಪುರ ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ: ಇಎಲ್‌ಎನ್(2)ಸಿಆರ್. 78/2014–15 ದಿನಾಂಕ: 13–04–2015 ರಲ್ಲಿ ಶಿಡ್ಲಘಟ್ಟ ತಾಲ್ಲೂಕಿನ ನಕ್ಕಲಹಳ್ಳಿ ಎಂಬ ಒಂದೇ ಹೆಸರಿನ ಎರಡು ಗ್ರಾಮಗಳು ಬೇರೆ ಬೇರೆ ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿದ್ದು ಜನಸಂಖ್ಯೆ ಅದಲು ಬದಲಾಗಿರುವ ಕಾರಣ ಸದರಿ ಗ್ರಾಮ ಪಂಚಾಯತಿಗಳ ಸದಸ್ಯ ಸ್ಥಾನಗಳ ಸಂಖ್ಯೆಯಲ್ಲಿ ವ್ಯತ್ಯಾಸವಾಗುತ್ತಿರುವುದರಿಂದ ತಿದ್ದುಪಡಿ ಮಾಡಿಕೊಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಗ್ರಾಮ ಪಂಚಾಯತಿಗಳಲ್ಲಿ ಜನಸಂಖ್ಯೆ ವ್ಯತ್ಯಾಸವಾಗಿರುವ ಬಗ್ಗೆ ತಿಳಿಸಿ ಪರಿಷ್ಕೃತ ಜನಸಂಖ್ಯೆ ಅಂಕಿ ಅಂಶಗಳನ್ನು ನೀಡಿರುತ್ತಾರೆ. ಅದರಂತೆ ಆಯೋಗವು ದಿನಾಂಕ: 08–04–2015 ರ ಅಧಿಸೂಚನೆಗೆ ಈ ಕೆಳಕಂಡ ಕೋಷ್ಟಕ–1 ರ ಕಾಲಂ (2) ರಲ್ಲಿ ನಮೂದಿಸಿರುವ ಗ್ರಾಮ ಪಂಚಾಯತಿಗೆ ಒಟ್ಟು ಸದಸ್ಯರ ಸಂಖ್ಯೆಯನ್ನು ಕಾಲಂ(3) ರಲ್ಲಿ ನಮೂದಿಸಿದಂತೆ ತಿದ್ದುಪಡಿ ಮಾಡಿದೆ.

**ಕೋಷ್ಟಕ–1**

**ತಾಲ್ಲೂಕು : ಶಿಡ್ಲಘಟ್ಟ**

| ದಿನಾಂಕ: 08–04–2015 ರ ಅಧಿಸೂಚನೆಯಲ್ಲಿದ್ದಂತೆ ಕ್ರಮ ಸಂಖ್ಯೆ | ಗ್ರಾಮ ಪಂಚಾಯತಿ ಹೆಸರು | ಒಟ್ಟು ಸದಸ್ಯರ ಸಂಖ್ಯೆ |
|---|---|---|
| 1 | 2 | 3 |
| 17 | ತಿಮ್ಮನಾಯಕನಹಳ್ಳಿ | 14 |
| 28 | ತಲಕಾಯಲಬೆಟ್ಟ | 14 |

ಆದೇಶಾನುಸಾರ

**ಆರ್. ಚಂದ್ರಶೇಖರ್**

ಅಧೀನ ಕಾರ್ಯದರ್ಶಿ

ರಾಜ್ಯ ಚುನಾವಣಾ ಆಯೋಗ

# ವಿಶೇಷ ರಾಜ್ಯ ಪತ್ರಿಕೆ

| ಭಾಗ– III<br>Part– III | ಬೆಂಗಳೂರು, ಶನಿವಾರ, ಏಪ್ರಿಲ್ ೧೮, ೨೦೧೫ (ಚೈತ್ರ ೨೮, ಶಕ ವರ್ಷ ೧೯೩೭)<br>Bangalore, Saturday, April 18, 2015 (Chaithra 28, Shaka Varsha 1937) | ನಂ. ೩೪೨<br>No. 342 |
|---|---|---|

**ರಾಜ್ಯ ಚುನಾವಣಾ ಆಯೋಗ, ಕರ್ನಾಟಕ**

ಕೆ.ಎಸ್.ಸಿ.ಎಂ.ಎಫ್. ಕಟ್ಟಡ (ಹಿಂಭಾಗ), ನಂ.8, 1ನೇ ಮಹಡಿ, ಕನ್ನಿಂಗ್‌ಹ್ಯಾಂ ರಸ್ತೆ, ಬೆಂಗಳೂರು–52

**ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ : ರಾಚುಆ.58.ಇಜಿಪಿ.2015 ದಿನಾಂಕ: 18-04-2015**

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 5 ಉಪ ಪ್ರಕರಣ (1) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ **ಬೆಳಗಾವಿ** ಜಿಲ್ಲೆಯ ಗ್ರಾಮ ಪಂಚಾಯತಿಗಳಿಗೆ 2011 ರ ಜನಗಣತಿಯ ಜನಸಂಖ್ಯೆಯಂತೆ ಸದಸ್ಯ ಸ್ಥಾನವನ್ನು ನಿರ್ದಿಷ್ಟಪಡಿಸಿ ಹೊರಡಿಸಿರುವ ಅಧಿಸೂಚನೆ ಸಂಖ್ಯೆ: ರಾಚುಆ.58.ಇಜಿಪಿ.2015 ದಿನಾಂಕ: 01–04–2015 ನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲಾಗಿದೆ. ಜಿಲ್ಲಾಧಿಕಾರಿಗಳು ತಮ್ಮ ಪತ್ರದ ಸಂಖ್ಯೆ: ಚುಶಾ/ಇಎಲ್‌ಎನ್/ಸಿಆರ್.–88/2014–15 ದಿನಾಂಕ: 06–04–2015 ರ ಪತ್ರದಲ್ಲಿ ಬೆಳಗಾವಿ ತಾಲ್ಲೂಕಿನ ಈ ಕೆಳಕಂಡ ಗ್ರಾಮ ಪಂಚಾಯತಿಗಳಲ್ಲಿ

ತಿದ್ದುಪಡಿಯಾಗಬೇಕಾದ ಗ್ರಾಮ ಪಂಚಾಯತಿ ಹೆಸರು ನಮೂದಿಸಿ ಕಳುಹಿಸಿರುತ್ತಾರೆ. ಆದುದರಿಂದ ಆಯೋಗವು ದಿನಾಂಕ: 01–04–2015 ರ ಅಧಿಸೂಚನೆಗೆ ಈ ಕೆಳಕಂಡ ಕೋಷ್ಟಕ–1 ರ ಕಲಂ(3) ರಲ್ಲಿ ನಮೂದಿಸಿದಂತೆ ತಿದ್ದುಪಡಿ ಮಾಡಿದೆ ಹಾಗೂ ಕೋಷ್ಟಕ–2 ರ ಕಲಂ(2) ರಲ್ಲಿ ನಮೂದಿಸಿರುವ ಗ್ರಾಮ ಪಂಚಾಯತಿಗಳ ಹೆಸರನ್ನು ಕಲಂ(3) ರಲ್ಲಿ ನಮೂದಿಸಿದಂತೆ ತಿದ್ದುಪಡಿ ಮಾಡಿದೆ.

**ಕೋಷ್ಟಕ–1**

**ತಾಲ್ಲೂಕು : ಬೆಳಗಾವಿ**

| **ದಿನಾಂಕ: 01–04–2015 ರ ಅಧಿಸೂಚನೆಯಲ್ಲಿದ್ದಂತೆ ಕ್ರಮ ಸಂಖ್ಯೆ** | **ದಿನಾಂಕ: 01–04–2015 ರ ಅಧಿಸೂಚನೆಯಲ್ಲಿದ್ದಂತೆ ಗ್ರಾಮ ಪಂಚಾಯತಿ ಹೆಸರು** | **ತಿದ್ದುಪಡಿಯಂತೆ ಗ್ರಾಮ ಪಂಚಾಯತಿ ಹೆಸರು** |
|---|---|---|
| **1** | **2** | **3** |
| 56 | ಮಾರ್ಕಂಡೇಯನಗರ | ವಾಘವಾಡೆ ಪುನರ್‌ವಸತಿ ಕೇಂದ್ರ ಮಾರ್ಕಂಡೇಯನಗರ |

ಆದೇಶಾನುಸಾರ

**ಆರ್. ಚಂದ್ರಶೇಖರ್**

ಅಧೀನ ಕಾರ್ಯದರ್ಶಿ

ರಾಜ್ಯ ಚುನಾವಣಾ ಆಯೋಗ

# ವಿಶೇಷ ರಾಜ್ಯ ಪತ್ರಿಕೆ

| ಭಾಗ – III<br>Part – III | ಬೆಂಗಳೂರು, ಬುಧವಾರ, ಫೆಬ್ರವರಿ ೧೮, ೨೦೧೫ (ಮಾಘ ೨೯, ಶಕ ವರ್ಷ ೧೯೩೬)<br>Bengaluru, Wednesday, February 18, 2015 (Magha 29, Shaka Varsha 1936) | ನಂ. ೧೭೮<br>No. 178 |
|---|---|---|


**ಆಯುಕ್ತರ ಕಾರ್ಯಾಲಯ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ನ.ರಾ.ಚೌಕ.ಬೆಂಗಳೂರು–560002.**

**ಅಧಿಸೂಚನೆ**

**ಸಂಖ್ಯೆ: ಇಎಲ್‌ಎನ್/ಪಿಆರ್/37/2014–15, ದಿನಾಂಕ: 13ನೇ ಫೆಬ್ರವರಿ, 2015**

ಭಾರತ ಸಂವಿಧಾನದ ಅನುಚ್ಛೇದ 243 ಜೆಡ್ ಎ ಯೊಂದಿಗೆ ಓದಲಾದ ಕರ್ನಾಟಕ ಮುನಿಸಿಪಲ್ ಕಾರ್ಪೊರೇಷನ್ ಕಾಯ್ದೆ 1976ರ ಪ್ರಕರಣ 23 ಮತ್ತು 55 ರಡಿಯಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಮತದಾರರ ಪಟ್ಟಿಗಳನ್ನು ಸಿದ್ಧಪಡಿಸುವ ಬಗ್ಗೆ ಈಗಾಗಲೇ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಹಾಗೂ ಬೃಹತ್‌ಬೆಂಗಳೂರು ಮಹಾನಗರ ಪಾಲಿಕೆಯ ಅಪರ ಆಯುಕ್ತರು (ಆಡಳಿತ) (ದಕ್ಷಿಣ) ಮತ್ತು ಮಹದೇವಪುರ ಇವರುಗಳನ್ನು ಜಿಲ್ಲಾ ಚುನಾವಣಾಧಿಕಾರಿಗಳನ್ನಾಗಿ ಹಾಗೂ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಅಪರ/ ಜಂಟಿ ಆಯುಕ್ತರುಗಳನ್ನು ಅಧಿಕ ಜಿಲ್ಲಾ ಚುನಾವಣಾಧಿಕಾರಿಗಳನ್ನಾಗಿ ಈಗಾಗಲೇ ನೇಮಕಾತಿ ಮಾಡಲಾಗಿದೆ.

ಪ್ರಸ್ತುತ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ವಿಧಾನಸಭಾ ವ್ಯಾಪ್ತಿಗೊಳಪಡುವ ವಲಯವಾರು / ವಿಭಾಗವಾರು ಕರ್ತವ್ಯ ನಿರ್ವಹಿಸುತ್ತಿರುವ ಕಂದಾಯಾಧಿಕಾರಿಗಳನ್ನು ಹಾಗೂ ಸಹಾಯಕ ಕಂದಾಯಾಧಿಕಾರಿಗಳನ್ನು ವಿಧಾನಸಭಾ ಮತದಾರರ ಪಟ್ಟಿಯನ್ನು ಅನುಸರಿಸಿ ತಮ್ಮ ವ್ಯಾಪ್ತಿಗೊಳಪಡುವ ಹಾಗೂ ಅವರ ಹೆಸರಿನ ಮುಂದೆ ನಮೂದಿಸಿರುವ ವಾರ್ಡುಗಳ ಮತದಾರರ ಪಟ್ಟಿಯನ್ನು ತಯಾರಿಸಲು ಮತದಾರರ ನೊಂದಣಾಧಿಕಾರಿ ಹಾಗೂ ಸಹಾಯಕ ಮತದಾರರ ನೊಂದಣಾಧಿಕಾರಿಗಳೆಂದು ನೇಮಿಸಿ ಆದೇಶಿಸಿದೆ.

ಈ ರೀತಿ ನೇಮಿಸಲ್ಪಟ್ಟ ಮತದಾರರ ನೊಂದಣಾಧಿಕಾರಿಗಳು ಮತ್ತು ಮತದಾರರ ಸಹಾಯಕ ನೊಂದಣಾಧಿಕಾರಿಗಳು ಅವರವರ ವ್ಯಾಪ್ತಿಯಲ್ಲಿ ಬರುವ ವಾರ್ಡುಗಳ ಮತದಾರರ ಪಟ್ಟಿಯನ್ನು ತಯಾರಿಸಲು ಹಾಗೂ ಚುನಾವಣೆ ಕಾರ್ಯವನ್ನು ವಿದ್ಯುಕ್ತವಾಗಿ ನಿರ್ವಹಿಸಲು ಆದೇಶಿಸಿದೆ.

**ಕೋಷ್ಟಕ**

| ಕ್ರ. ಸಂ. | ವಲಯ | ವಿಧಾನಸಭಾ ಕ್ಷೇತ್ರದ ಹೆಸರು | ವಿಭಾಗದ ಹೆಸರು | ಕಂದಾಯ ಅಧಿಕಾರಿ/ ಮತದಾರರ ನೋಂದಣಾಧಿಕಾರಿ ಹೆಸರು | ಉಪವಿಭಾಗದ ಹೆಸರು | ಸಹಾಯಕ ಕಂದಾಯ ಅಧಿಕಾರಿ/ ಸಹಾಯಕ ಮತದಾರರ ನೋಂದಣಾಧಿಕಾರಿ ಹೆಸರು | ವಾರ್ಡ್ ಸಂಖ್ಯೆ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಯಲಹಂಕ ವಲಯ | 150–ಯಲಹಂಕ | ಯಲಹಂಕ | ಉದಯಕುಮಾರ್ | ಯಲಹಂಕ | ಕೃಷ್ಣಪ್ಪ | 1,2 |
| | | | | | ಯಲಹಂಕ ಸ್ಯಾಟಲೈಟ್ ಟೌನ್ | ನಾರಾಯಣಸ್ವಾಮಿ | 3,4 |
| | | 152–ಬ್ಯಾಟರಾಯನಪುರ | ಬ್ಯಾಟರಾಯನಪುರ | ಪಂಚಲಿಂಗೇಗೌಡ | ಬ್ಯಾಟರಾಯನಪುರ | ಸತೀಶ್‌ಕುಮಾರ್ | 5,6,7 |
| | | | | | ಕೊಡಿಗೇಹಳ್ಳಿ | ಭೀಮಾಶಂಕರ್ | 8,9 |
| | | | | | ವಿದ್ಯಾರಣ್ಯಪುರ | ನಾಗರಾಜು | 10,11 |

| ಕ್ರ. ಸಂ. | ವಲಯ | ವಿಧಾನಸಭಾ ಕ್ಷೇತ್ರದ ಹೆಸರು | ವಿಭಾಗದ ಹೆಸರು | ಕಂದಾಯ ಅಧಿಕಾರಿ/ ಮತದಾರರ ನೋಂದಣಾಧಿಕಾರಿ ಹೆಸರು | ಉಪವಿಭಾಗದ ಹೆಸರು | ಸಹಾಯಕ ಕಂದಾಯ ಅಧಿಕಾರಿ/ ಸಹಾಯಕ ಮತದಾರರ ನೋಂದಣಾಧಿಕಾರಿ ಹೆಸರು | ವಾರ್ಡ್ ಸಂಖ್ಯೆ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 2 | ಮಹದೇವಪುರ ವಲಯ | 151–ಕೆ.ಆರ್‌ಪುರ | ಕೆ.ಆರ್‌ಪುರ | ವಸಂತಕುಮಾರಿ | ಹೊರಮಾವು | ಆರ್.ನಾಗೇಂದ್ರ | 25,26,51 |
| | | | | | ಕೆ.ಆರ್.ಪುರ | ನಂದನ | 52,53,55 |
| | | | | | ಹೆಚ್.ಎ.ಎಲ್ | ಕೆ.ವಿಜಯ್‌ಶೇಖರ್ | 56,81,87 |
| | | 174–ಮಹದೇವಪುರ | ಮಹದೇವಪುರ | ಅವಿನಾಶ್ ಬಾಬು | ಹೂಡಿ | ಮುನಿಯಪ್ಪ | 54,82,85 |
| | | | | | ವೈಟ್‌ಫೀಲ್ಡ್ | ಲಿಂಗಣ್ಣ | 83,84,149 |
| | | | | | ಮಾರತ್ ಹಳ್ಳಿ | ನಾಗರಾಜ | 86,150 |
| 3 | ದಾಸರಹಳ್ಳಿ ವಲಯ | 155–ದಾಸರಹಳ್ಳಿ | ದಾಸರಹಳ್ಳಿ | ಟಿ. ಬಾಲಚಂದ್ರ | ಶೆಟ್ಟಿಹಳ್ಳಿ | ರಾಮಚಂದ್ರರಾವ್ | 12,13 |
| | | | | | ಟಿ.ದಾಸರಹಳ್ಳಿ | ಬಸವಲಿಂಗಪ್ಪ | 14,15 |
| | | | | | ಪೀಣ್ಯ ಕೈಗಾರಿಕಾ ಕೇಂದ್ರ | ವಿಜಯಲಕ್ಷ್ಮೀ | 39,41 |
| | | | | | ಹೆಗ್ಗನಹಳ್ಳಿ | ಅನಂತರಾಮಯ್ಯ | 70,71 |
| 4 | ರಾಜರಾಜೇಶ್ವರಿನಗರ ವಲಯ | 154–ರಾಜರಾಜೇಶ್ವರಿನಗರ | ರಾಜರಾಜೇಶ್ವರಿನಗರ | ರಾಮಕೃಷ್ಣಯ್ಯ | ರಾಜರಾಜೇಶ್ವರಿನಗರ | ಚಂದ್ರಶೇಖರಯ್ಯ | 160,129 |
| | | | | | ಲಗ್ಗೆರೆ | ಎಸ್.ಎಸ್.ನಾಗರಾಜ್ | 69,73 |
| | | | | | ಲಕ್ಷ್ಮೀದೇವಿನಗರ | ರಾಮದಾಸ್ | 38,42 |
| | | | | | ಯಶವಂತಪುರ | ಎನ್. ಸುರೇಶ್ | 16,17,37 |
| | | 153–ಯಶವಂತಪುರ | ಕೆಂಗೇರಿ | ಪಿ. ದಯಾನಂದ | ಕೆಂಗೇರಿ | ಜಯ | 130,159,198 |
| | | | | | ಹೇರೋಹಳ್ಳಿ | ಕೆ.ಟಿ. ರಂಗನಾಥ | 40,72 |
| 5 | ಪಶ್ಚಿಮ ವಲಯ | 156–ಮಹಾಲಕ್ಷ್ಮೀ ಲೇಔಟ್ | ಮಹಾಲಕ್ಷ್ಮೀ ಲೇಔಟ್ | ಮಹಾದೇವಿ.ಆರ್.ವಿ. | ಮಹಾಲಕ್ಷ್ಮೀ ಲೇಔಟ್ | ಬಸವಲಿಂಗಯ್ಯ | 43,44,68,74 |
| | | | | | ನಾಗಪುರ | ಹೊಂಬೇಗೌಡ | 67,75,102 |
| | | 157–ಮಲ್ಲೇಶ್ವರಂ | ಮಲ್ಲೇಶ್ವರಂ | ಕೆಂಪರಂಗಯ್ಯ | ಮತ್ತಿಕೆರೆ | ಗೋಪಾಲಯ್ಯ | 35,36,45 |
| | | | | | ಮಲ್ಲೇಶ್ವರಂ | ಶಾಂತೇಶ್ | 64,65,66,76 |
| | | 165–ರಾಜಾಜಿನಗರ | ರಾಜಾಜಿನಗರ | ಹೆಚ್.ಎನ್.ನಾಗೇಂದ್ರ | ರಾಜಾಜಿನಗರ | ಈ.ಕಾಂಚನಾ | 99,100,101,107 |

| ಕ್ರ. ಸಂ. | ವಲಯ | ವಿಧಾನಸಭಾ ಕ್ಷೇತ್ರದ ಹೆಸರು | ವಿಭಾಗದ ಹೆಸರು | ಕಂದಾಯ ಅಧಿಕಾರಿ/ ಮತದಾರರ ನೋಂದಣಾಧಿಕಾರಿ ಹೆಸರು | ಉಪವಿಭಾಗದ ಹೆಸರು | ಸಹಾಯಕ ಕಂದಾಯ ಅಧಿಕಾರಿ/ ಸಹಾಯಕ ಮತದಾರರ ನೋಂದಣಾಧಿಕಾರಿ ಹೆಸರು | ವಾರ್ಡ್ ಸಂಖ್ಯೆ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| | | | | | ಶ್ರೀ ರಾಮಮಂದಿರ | ಶ್ರೀನಿವಾಸ್ ಮೂರ್ತಿ | 97,98,108 |
| | | 164–ಗಾಂಧಿನಗರ | ಗಾಂಧಿನಗರ | ಡಿ.ಕೆ.ಬಾಬು | ಗಾಂಧಿನಗರ | ಹೆಚ್.ಕೆ.ನಾಗರಾಜ್ | 77,94,95,96 |
| | | | | | ಚಿಕ್ಕಪೇಟೆ | ರಾಮಚಂದ್ರ | 109,120,121 |
| | | 168–ಚಾಮರಾಜಪೇಟೆ | ಚಾಮರಾಜಪೇಟೆ | ಶಿವಸ್ವಾಮಿ | ಜಗಜೀವನರಾಂ ನಗರ | ಉಗ್ರೇಗೌಡ | 135,136,137,138 |
| | | | | | ಚಾಮರಾಜಪೇಟೆ | ಅಶೋಕ್ | 139,140,141 |
| | | 169–ಚಿಕ್ಕಪೇಟೆ | ಚಿಕ್ಕಪೇಟೆ | ಗಂಗಣ್ಣ | ಕೆಂಪೇಗೌಡ ನಗರ | ಲಿಂಗಯ್ಯ | 118,119,142,143 |
| | | | | | ಹೊಂಬೇಗೌಡ ನಗರ | ಕೆ.ಸಿ.ಚನ್ನಪ್ಪ | 144,145,153 |
| 6 | ದಕ್ಷಿಣ ವಲಯ | 166–ಗೋವಿಂದರಾಜನಗರ | ಗೋವಿಂದರಾಜನಗರ | ಜಿ. ಶ್ರೀನಿವಾಸ್ | ಗೋವಿಂದರಾಜನಗರ | ಮುನಿಲಕ್ಷ್ಮೀ | 103,104,105,106,125 |
| | | | | | ಚಂದ್ರಾಲೇಔಟ್ | ವೆಂಕಟಲಕ್ಷ್ಮೀ | 126,127,128,131 |
| | | 167–ವಿಜಯನಗರ | ವಿಜಯನಗರ | ಬಿ.ಕೆ.ನರಸಿಂಹನಾಯ್ಡು | ವಿಜಯನಗರ | ಶಿವಮ್ಮ | 122,123,124,134 |
| | | | | | ಗಾಳಿ ಆಂಜನೇಯ ದೇವಸ್ಥಾನ | ರಾಮಚಂದ್ರಯ್ಯ | 132,133,157,158 |
| | | 170–ಬಸವನಗುಡಿ | ಬಸವನಗುಡಿ | ಎಸ್.ಎನ್.ಆಶಾ | ಬಸವನಗುಡಿ | ಚಂದ್ರಶೇಖರ್ | 154,155,164 |
| | | | | | ಗಿರಿನಗರ | ಉಮಾ | 156,162,163 |
| | | 171–ಪದ್ಮನಾಭನಗರ | ಪದ್ಮನಾಭನಗರ | ಉಮೇಶ್ | ಪದ್ಮನಾಭನಗರ | ಈಶ್ವರ ರಾಯುಡು | 161,165,182,183 |
| | | | | | ಬನಶಂಕರಿ | ಸಿ.ನಾರಾಯಣ್ | 166,167,180,181 |
| | | 172–ಬಿ.ಟಿ.ಎಂ.ಲೇಔಟ್ | ಬಿ.ಟಿ.ಎಂ.ಲೇಔಟ್ | ವಿ.ಎಸ್.ಲತಾ | ಬಿ.ಟಿ.ಎಂ.ಲೇಔಟ್ | ತಿಪ್ಪರಾಜು | 146,152,172,176 |
| | | | | | ಕೋರಮಂಗಲ | ಶ್ರೀನಿವಾಸ್ | 147,148,151,173 |
| | | 173–ಜಯನಗರ | ಜಯನಗರ | ಡಿ.ಎನ್.ನಾಗೇಶ್ | ಜಯನಗರ | ನಾಗೇಂದ್ರ | 168,169,170,171 |
| | | | | | ಜೆ.ಪಿ.ನಗರ | ಕೆ.ಎಸ್.ಲೀಲಾವತಿ | 177,178,179 |
| 7 | ಪೂರ್ವ ವಲಯ | 158–ಹೆಬ್ಬಾಳ | ಹೆಬ್ಬಾಳ | ಕೆ.ಸಿ.ರಾಮಕೃಷ್ಣಯ್ಯ | ಹೆಬ್ಬಾಳ | ನಾಗಭೂಷಣ್ | 18,19,20,21 |
| | | | | | ಜೆ.ಸಿ.ನಗರ | ಬಿ.ಆರ್.ಮಂಜುಳಾ | 22,33,34,46 |

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



| ಕ್ರ. ಸಂ. | ವಲಯ | ವಿಧಾನಸಭಾ ಕ್ಷೇತ್ರದ ಹೆಸರು | ವಿಭಾಗದ ಹೆಸರು | ಕಂದಾಯ ಅಧಿಕಾರಿ/ ಮತದಾರರ ನೋಂದಣಾಧಿಕಾರಿ ಹೆಸರು | ಉಪವಿಭಾಗದ ಹೆಸರು | ಸಹಾಯಕ ಕಂದಾಯ ಅಧಿಕಾರಿ/ ಸಹಾಯಕ ಮತದಾರರ ನೋಂದಣಾಧಿಕಾರಿ ಹೆಸರು | ವಾರ್ಡ್ ಸಂಖ್ಯೆ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| | | 159–ಪುಲಕೇಶಿನಗರ | ಪುಲಕೇಶಿನಗರ | ಎಸ್.ಬಿ.ಮಧು | ಕೆ.ಜಿ.ಹಳ್ಳಿ | ಪ್ರದೀಪ್.ರಾಥೋಡ್ | 31,32,48,60 |
| | | | | | ಪುಲಕೇಶಿನಗರ | ಡಿ.ರಾಮಕೃಷ್ಣರಾವ್ | 47,61,78 |
| | | 160–ಸರ್ವಜ್ಞನಗರ | ಸರ್ವಜ್ಞನಗರ | ಜೆ.ಫ್ರಾನ್ಸಿಸ್ | ಮಾರುತಿಸೇವಾನಗರ | ಗಜೇಂದ್ರ | 27,28,49,59 |
| | | | | | ಹೆಚ್.ಬಿ.ಆರ್.ಲೇಔಟ್ | ಗಿರಿಯಪ್ಪ | 23,24,29,30 |
| | | 161–ಸಿ.ವಿ.ರಾಮನ್‌ನಗರ | ಸಿ.ವಿ.ರಾಮನ್‌ನಗರ | ನಾಗರತ್ನಮ್ಮ | ಜೀವನಭೀಮಾನಗರ | ವೈ.ಬೈರೇಗೌಡ | 80,88,113 |
| | | | | | ಸಿ.ವಿ.ರಾಮನ್‌ನಗರ | ಎಂ.ಸೂರ್ಯಕುಮಾರಿ | 50,57,58,79 |
| | | 163–ಶಾಂತಿನಗರ | ಶಾಂತಿನಗರ | ಕೆಂಚಯ್ಯ | ಶಾಂತಿನಗರ | ಸಾವಿತ್ರಮ್ಮ | 111,116,117 |
| | | | | | ದೊಮ್ಮಲೂರು | ಎಸ್.ಎನ್.ನಾಗರಾಜ್ | 89,112,114,115 |
| | | 162–ಶಿವಾಜಿನಗರ | ಶಿವಾಜಿನಗರ | ಪ್ರಸನ್ನಕುಮಾರ್ | ಶಿವಾಜಿನಗರ | ಚಂದ್ರಕಾಂತ | 90,91,92 |
| | | | | | ವಸಂತನಗರ | ಸುಹೇಲ್ ಅಹಮದ್ | 62,63,93,110 |
| 8 | ಬೊಮ್ಮನಹಳ್ಳಿ ವಲಯ | 175–ಬೊಮ್ಮನಹಳ್ಳಿ | ಬೊಮ್ಮನಹಳ್ಳಿ | ಚಂದ್ರಶೇಖರ್ | ಬೊಮ್ಮನಹಳ್ಳಿ | ಬಿ.ಬಸವರಾಜು | 175,188,189 |
| | | | | | ಅರಕೆರೆ | ಪ್ರತಾಪ್ | 186,187,193 |
| | | | | | ಹೆಚ್.ಎಸ್.ಆರ್.ಬಡಾವಣೆ | ವರಲಕ್ಷ್ಮೀ | 174,190 |
| | | 176–ಬೆಂಗಳೂರು ದಕ್ಷಿಣ ಆನೇಕಲ್ | ಅಂಜನಾಪುರ | ಗುಲ್ತಾಜ್ ಫಾತಿಮಾ | ಬೇಗೂರು | ಸೋಮಶೇಖರ್ | 191,192 |
| | | | | | ಅಂಜನಾಪುರ | ಪ್ರಕಾಶ್ | 194,196 |
| | | | ಉತ್ತರಹಳ್ಳಿ | ಎಸ್.ಎಸ್. ಆಶಾ | ಯಲಚೇನಹಳ್ಳಿ | ಚನ್ನಮ್ಮ | 195,185 |
| | | | | | ಉತ್ತರಹಳ್ಳಿ | ರಾಜಣ್ಣ | 184,197 |

**ಎಂ. ಲಕ್ಷ್ಮೀನಾರಾಯಣ**
ಜಿಲ್ಲಾ ಚುನಾವಣಾಧಿಕಾರಿ ಹಾಗೂ ಆಯುಕ್ತರು
ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59

ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ – IV-A | ಬೆಂಗಳೂರು, ಗುರುವಾರ, ಮಾರ್ಚ್ ೨೬, ೨೦೧೪ (ಚೈತ್ರ ೦೫, ಶಕ ವರ್ಷ ೧೯೩೭) | ನಂ. ೨೩೬ |
|---|---|---|
| **Part – IV-A** | **Bengaluru, Thursday, March 26, 2014 (Chaithra 05, Shaka Varsha 1937)** | **No. 236** |

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/11/LA Bill/2015, Bengaluru, Dated: 26-3-2015**

The following Bill was introduced in Legislative Assembly on 26-3-2015

**ಕರ್ನಾಟಕ ವಿಧಾನ ಸಭೆ**

**ಹದಿನಾಲ್ಕನೇ ವಿಧಾನ ಸಭೆ**

**ಆರನೇ ಅಧಿವೇಶನ**

**(ಮುಂದುವರೆದ ಉಪವೇಶನ)**

**ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಶಿಕ್ಷಕರ ವರ್ಗಾವಣೆ ನಿಯಂತ್ರಣ) (ತಿದ್ದುಪಡಿ) ವಿಧೇಯಕ, 2015**

**(2015ರ ವಿಧಾನಸಭೆಯ ವಿಧೇಯಕ ಸಂಖ್ಯೆ – 11)**

ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಶಿಕ್ಷಕರ ವರ್ಗಾವಣೆ ನಿಯಂತ್ರಣ) ಅಧಿನಿಯಮ, 2007ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ, ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಶಿಕ್ಷಕರ ವರ್ಗಾವಣೆ ನಿಯಂತ್ರಣ) 2007ನ್ನು (2007ರ ಕರ್ನಾಟಕ ಅಧಿನಿಯಮ 29) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತಾರನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಶಿಕ್ಷಕರ ವರ್ಗಾವಣೆ ನಿಯಂತ್ರಣ) (ತಿದ್ದುಪಡಿ) ಅಧಿನಿಯಮ, 2015 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 5ನೇ ಪ್ರಕರಣದ ತಿದ್ದುಪಡಿ.–** ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಶಿಕ್ಷಕರ ವರ್ಗಾವಣೆ ನಿಯಂತ್ರಣ) ಅಧಿನಿಯಮ, 2007ರ (2007ರ ಕರ್ನಾಟಕ ಅಧಿನಿಯಮ 29) (ಇಲ್ಲಿ ಇನ್ನುಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 5ನೇ ಪ್ರಕರಣದಲ್ಲಿನ ಪರಂತುಕಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"ಪರಂತು, ಒಂದು ಜೇಷ್ಠತಾ ಘಟಕದಲ್ಲಿ ಅಂಥ ವರ್ಗಾವಣೆಗಳ ಒಟ್ಟು ಸಂಖ್ಯೆಯು, ಸಾರ್ವಜನಿಕ ಹಿತಾಸಕ್ತಿ ವರ್ಗಾವಣೆಗಳ ಸಂದರ್ಭದಲ್ಲಿ ಶೇಕಡಾ ಐದರಷ್ಟನ್ನು ಮತ್ತು ಅಂತರ್ ಘಟಕೀಯ ಜೇಷ್ಠತಾ ವರ್ಗಾವಣೆಗಳ ಸಂದರ್ಭದಲ್ಲಿ ಶೇಕಡಾ ಮೂರರಷ್ಟನ್ನು ಹಾಗೂ ಒಟ್ಟಾರೆಯಾಗಿ ಆ ಜೇಷ್ಠತಾ ಘಟಕದ ಕೇಡರ್‌ನಲ್ಲಿ ಮಂಜೂರಾದ ಶಿಕ್ಷಕರ ಹುದ್ದೆಗಳ ಒಟ್ಟು ಸಂಖ್ಯೆ ಶೇಕಡಾ ಎಂಟರಷ್ಟನ್ನು ಮೀರತಕ್ಕದ್ದಲ್ಲ."

**3. 6ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 6ನೇ ಪ್ರಕರಣದ (2)ನೇ ಉಪಪ್ರಕರಣದಲ್ಲಿ (1)ನೇ ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(1) ಗಂಡ ಹೆಂಡತಿ ಇಬ್ಬರೂ ಸರ್ಕಾರಿ ನೌಕರರಾಗಿದ್ದಲ್ಲಿ ಮತ್ತು ಶಿಕ್ಷಕರು ಪ್ರಸ್ತುತ ಇರುವ ಜೇಷ್ಠತಾ ಘಟಕದಲ್ಲಿ ಕನಿಷ್ಠ ಮೂರು ವರ್ಷಗಳ ಸೇವೆಯನ್ನು ಸಲ್ಲಿಸಿದ್ದಲ್ಲಿ, ಕೌನ್ಸಿಲಿಂಗ್ ಮೂಲಕ ಆತನ/ಆಕೆಯ ಹೆಂಡತಿ/ಗಂಡ ಸೇವೆ ಸಲ್ಲಿಸುತ್ತಿರುವ ಸ್ಥಳಕ್ಕೆ ಅಥವಾ ಹತ್ತಿರದ ಸ್ಥಳಕ್ಕೆ ಸ್ಪಷ್ಟ ಖಾಲಿ ಸ್ಥಳದ ಲಭ್ಯತೆಯ ಆಧಾರದ ಮೇರೆಗೆ ಸೇವಾ ಅವಧಿಯಲ್ಲಿ ಎರಡು ಬಾರಿಗಿಂತ ಹೆಚ್ಚಲ್ಲದೆ ವರ್ಗಾವಣೆ ಮಾಡಬಹುದು.

(1ಎ) ಪರಸ್ಪರ ವರ್ಗಾವಣೆಗಳ ಸಂದರ್ಭದಲ್ಲಿ, ಇಬ್ಬರೂ ಶಿಕ್ಷಕರು ಕನಿಷ್ಟ ಮೂರು ವರ್ಷಗಳ ಸೇವಾ ಅವಧಿಯನ್ನು ಪೂರ್ಣಗೊಳಿಸಿದ ಷರತ್ತಿಗೆ ಒಳಪಟ್ಟು; ಆ ವಲಯಕ್ಕೆ ವರ್ಗಾಯಿಸಲು ಅನ್ಯಥಾ ಅರ್ಹನಾಗಿರುವ; ಕನಿಷ್ಟ ಮೂರು ವರ್ಷಗಳ ಸೇವೆಯು ಬಾಕಿ ಉಳಿದಿರುವ; ಆದರೆ ಅಂಥ ಪರಸ್ಪರ ವರ್ಗಾವಣೆಯು ಆತನ ಸೇವಾವಧಿಯಲ್ಲಿ ಒಂದಕ್ಕಿಂತ ಹೆಚ್ಚು ಬಾರಿ ಅನುಮತಿಸತಕ್ಕದ್ದಲ್ಲ ಹಾಗೂ ಆತನು ಜೇಷ್ಠತೆಯ ರಕ್ಷಣೆಗೆ ಅರ್ಹನಾಗಿರತಕ್ಕದ್ದಲ್ಲ."

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಶಿಕ್ಷಕರ ವರ್ಗಾವಣೆ ನಿಯಂತ್ರಣ) ಅಧಿನಿಯಮ, 2007ನ್ನು,

(i) ಸಾರ್ವಜನಿಕ ಹಿತಾಸಕ್ತಿಯ ವರ್ಗಾವಣೆಗಳ ಮಿತಿಯನ್ನು ಶೇ.5 ರಿಂದ ಶೇ.8 ರವರೆಗೆ ಹೆಚ್ಚಿಸುವುದಕ್ಕಾಗಿ;

(ii) ಪತಿ ಮತ್ತು ಪತ್ನಿ ಹಾಗೂ ಪರಸ್ಪರ ವರ್ಗಾವಣೆಗಳ ಸಂದರ್ಭದಲ್ಲಿ ಒಂದು ಜೇಷ್ಠತಾ ಘಟಕದಿಂದ ಮತ್ತೊಂದು ಜೇಷ್ಠತಾ ಘಟಕಕ್ಕೆ ಶಿಕ್ಷಕರ ವರ್ಗಾವಣೆಯ ನಿಷೇಧವನ್ನು ಸಡಿಲಗೊಳಿಸುವುದಕ್ಕಾಗಿ,–

– ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಕಿಮ್ಮನೆ ರತ್ನಾಕರ**
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

**ಅನುಬಂಧ**

**ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಶಿಕ್ಷಕರ ವರ್ಗಾವಣೆ ನಿಯಂತ್ರಣ) ಅಧಿನಿಯಮ, 2007ರ**
**(2007ರ ಕರ್ನಾಟಕ ಅಧಿನಿಯಮ ಸಂಖ್ಯೆ 29) ಉದ್ಧೃತ ಭಾಗ**

**Xx xx xx**

**5. ಸಾರ್ವಜನಿಕ ಸೇವಾ ಹಿತದೃಷ್ಟಿಯಿಂದ ಶಿಕ್ಷಕರ ವರ್ಗಾವಣೆ.– Xx xx xx**

ಪರಂತು, ಒಂದು ಜೇಷ್ಠತಾ ಘಟಕದಲ್ಲಿ ಅಂಥ ವರ್ಗಾವಣೆಗಳ ಒಟ್ಟು ಸಂಖ್ಯೆಯು ಆ ಜೇಷ್ಠತಾ ಘಟಕದ ಕೇಡರ್‌ನಲ್ಲಿ ಮಂಜೂರಾದ ಶಿಕ್ಷಕರ ಹುದ್ದೆಗಳ ಒಟ್ಟು ಸಂಖ್ಯೆಯ ಶೇಕಡಾ ಐದರಷ್ಟನ್ನು ಮೀರತಕ್ಕದ್ದಲ್ಲ."

**6. ಒಂದು ಜೇಷ್ಠತಾ ಘಟಕದಿಂದ ಇನ್ನೊಂದು ಜೇಷ್ಠತಾ ಘಟಕಕ್ಕೆ ಶಿಕ್ಷಕರನ್ನು ವರ್ಗಾವಣೆ ಮಾಡುವುದಕ್ಕೆ ನಿಷೇಧ.–** (1) **Xx xx xx**

(2) ಈ ಮುಂದಿನ ಪ್ರಕರಣಗಳಲ್ಲಿ (1)ನೇ ಉಪ ಪ್ರಕರಣದ ಉಪಬಂಧವನ್ನು ಸಡಿಲಗೊಳಿಸಬಹುದು, ಎಂದರೆ:–

(1) ವಿವಾಹಿತ ಶಿಕ್ಷಕರ ಸಂದರ್ಭದಲ್ಲಿ ಅವರ ಗಂಡ ಅಥವಾ ಹೆಂಡತಿಯು ಜೇಷ್ಠತಾ ಘಟಕದಿಂದ ಹೊರಗೆ ವಾಸವಾಗಿದ್ದಲ್ಲಿ, ಆಗ ಆ ಶಿಕ್ಷಕ ಅಥವಾ ಶಿಕ್ಷಕಿಯನ್ನು ಸ್ಪಷ್ಟ ಖಾಲಿ ಸ್ಥಳ ದೊರೆಯುವುದಕ್ಕೆ ಒಳಪಟ್ಟು ಪ್ರಸ್ತುತ ಜೇಷ್ಠತಾ ಘಟಕದಲ್ಲಿ, ಅವನು/ಅವಳು 3 ವರ್ಷಗಳಿಗಿಂತ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿದ್ದಲ್ಲಿ ಆ ಜೇಷ್ಠತಾ ಘಟಕದಿಂದ ಹೊರಕ್ಕೆ ಸೇವಾ ಅವಧಿಯಲ್ಲಿ ಒಂದು ಬಾರಿ ವರ್ಗಾವಣೆ ಮಾಡಬಹುದು;

**ಕರ್ನಾಟಕ ವಿಧಾನಸಭೆಯ ಕಾರ್ಯವಿಧಾನ ಮತ್ತು ನಡವಳಿಕೆಗಳ 80ನೇ ನಿಯಮದ (1)ನೇ ಉಪನಿಯಮದ ಮೂಲಕ ಅಗತ್ಯಪಡಿಸಲಾದಂತೆ ವಿವರಣಾತ್ಮಕ ಹೇಳಿಕೆ**

ಶಿಕ್ಷಣದ ಗುಣಮಟ್ಟವನ್ನು ಸುಧಾರಿಸಲು ಮತ್ತು ವ್ಯವಸ್ಥಾಪನೆಗಳ ಹೊರೆಯನ್ನು ಕಡಿಮೆ ಮಾಡಲು ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗೆ ವೇತನ ಅನುದಾನವನ್ನು ನೀಡುವ ಮೂಲಕ ರಾಜ್ಯ ಸರ್ಕಾರವು ಹಲವಾರು ಖಾಸಗಿ ಶಿಕ್ಷಣ ಸಂಸ್ಥೆಗಳನ್ನು ಸಹಾಯಾನುದಾನಕ್ಕೆ ಒಳಪಡಿಸಿಕೊಂಡಿರುತ್ತದೆ.

ರಾಜ್ಯ ಸರ್ಕಾರದಿಂದ ನಿರ್ವಹಣಾ ಅನುದಾನವನ್ನು ಪಡೆಯುತ್ತಿರುವ ಶಿಕ್ಷಣ ಸಂಸ್ಥೆಗಳ ಸಿಬ್ಬಂದಿಗೆ ಇಲಾಖಾ ಪರೀಕ್ಷೆಗಳನ್ನು ಅಥವಾ ಕನ್ನಡ ಭಾಷಾ ಪರೀಕ್ಷೆಗಳನ್ನು ನಿಯಮಿಸಿಲ್ಲದಿರುವುದರಿಂದ;

ಸಹಾಯಾನುದಾನಕ್ಕೆ ಒಳಪಡಿಸಿರುವ ಖಾಸಗಿ ವ್ಯವಸ್ಥಾಪನಾ ಸಂಸ್ಥೆಗಳ ಬೋಧಕ ಸಿಬ್ಬಂದಿಗಳು ಕನ್ನಡ ಭಾಷೆಯೊಂದಿಗೆ ಎಸ್‌ಎಸ್‌ಎಲ್‌ಸಿ ಅಥವಾ ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾದವರಿಗೆ, ಸರ್ಕಾರಿ ನೌಕರರ ವೇತನ ಮತ್ತು ಉಪಲಬ್ಧಗಳಿಗೆ ಸರಿಸಮಾನವಾಗಿ, ಒಂದು ವೇತನಬಡ್ತಿಯ ಪ್ರಯೋಜನವನ್ನು ವಿಸ್ತರಿಸುವಂತೆ ದಿನಾಂಕ:30.06.2009ರ ರಿಟ್ ಪಿಟಿಷನ್ ಸಂಖ್ಯೆ: 13715/2006 ಸಿ/ಡಬ್ಲ್ಯೂ ಡಬ್ಲ್ಯೂ.ಪಿ. ಸಂಖ್ಯೆ: 17236/2008 ಮತ್ತು 10111–10681/2009 ಹಾಗೂ ದಿನಾಂಕ:25.03.2010ರ ರಿಟ್ ಅಪೀಲು ಸಂಖ್ಯೆ: 4255/2009 ಮತ್ತು 4556–5155/2009ರಲ್ಲಿ ಮಾಡಿರುವ ಕ್ಲೇಮನ್ನು ಸಮರ್ಥಿಸಲಾಗಿದೆ. ಅದಕ್ಕನುಸಾರವಾಗಿ ಸರ್ಕಾರವು ದಿನಾಂಕ:25.03.2011ರಂದು ಸಂಖ್ಯೆ:ED 302 PMC 2006 ರಲ್ಲಿ ಒಂದು ಆದೇಶವನ್ನು ಹೊರಡಿಸಿರುವುದರಿಂದ;

ದಿನಾಂಕ:25.03.2011ರ ಸರ್ಕಾರದ ಆದೇಶವನ್ನು ರಿಟ್ ಪಿಟಿಷನ್ ಸಂಖ್ಯೆ: 19846–20413/2012ರಲ್ಲಿ ಪ್ರಶ್ನಿಸಲಾಗಿದ್ದು, ಸದರಿ ಪಿಟಿಷನ್ ಅನ್ನು ಅಂಗೀಕರಿಸಿದ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು, ಅದರಲ್ಲಿರುವ ಅರ್ಜಿದಾರರುಗಳ ಸೇವಾ ವಿವರಗಳನ್ನು ಗಮನದಲ್ಲಿರಿಸಿಕೊಂಡು ಮತ್ತು ಅದೇ ರೀತಿಯಲ್ಲಿ ಸರ್ಕಾರಿ ಶಾಲೆಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳ ಸಂದರ್ಭದಲ್ಲಿ ಹೆಚ್ಚುವರಿ ವೇತನ ಬಡ್ತಿಯನ್ನು ಸಂದಾಯಿಸಲಾದಂತೆಯೇ ಈ ಅರ್ಜಿದಾರರ ಪ್ರಕರಣದಲ್ಲೂ ಲೆಕ್ಕ ಹಾಕುವಂತೆ ನಿರ್ದೇಶನದೊಂದಿಗೆ ದಿನಾಂಕ:10.08.2012ರಂದು ಆದೇಶಿಸಿರುವುದರಿಂದ;

ರಿಟ್ ಅರ್ಜಿ ಸಂಖ್ಯೆ: 19846–20413/2012ರಲ್ಲಿ ಹೊರಡಿಸಿದ ದಿನಾಂಕ:10.08.2012ರ ಆದೇಶಕ್ಕೆ ವಿರುದ್ಧವಾಗಿ ರಾಜ್ಯ ಸರ್ಕಾರವು ರಿಟ್ ಅಪೀಲಿನ ಸಂಖ್ಯೆ:2779 ಮತ್ತು 4868–5434/2013ರಲ್ಲಿ ಮೇಲ್ಮನವಿಯನ್ನು ದಾಖಲಿಸಿದ್ದು, ಮಾನ್ಯ ಉಚ್ಚ ನ್ಯಾಯಾಲಯವು ಸದರಿ ಅಪೀಲುಗಳನ್ನು ದಿನಾಂಕ:28.08.2013ರಂದು ವಜಾಗೊಳಿಸಿರುವುದರಿಂದ;

ಹಾಗೂ ಕರ್ನಾಟಕ ರಾಜ್ಯ ಸರ್ಕಾರವು ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ವಿಶೇಷ ಅನುಮತಿ ಅರ್ಜಿ (SLP) No.38205-38772/2013ರ ಮೂಲಕ ಮೇಲ್ಮನವಿಯನ್ನು ಹೂಡಿರುವುದರಿಂದ;

ರಿಟ್ ಪಿಟಿಷನ್ ಸಂಖ್ಯೆ:19846–20413/2012ರಲ್ಲಿ ದಿನಾಂಕ:10.08.2012ರಂದು ನೀಡಲಾದ ತೀರ್ಪನ್ನು ಅನುಷ್ಠಾನಗೊಳಿಸುವಂತೆ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ನಿಂದನಾ ಅರ್ಜಿ ಸಂಖ್ಯೆ (C.C.C.):648/2013ನ್ನು ಸಲ್ಲಿಸಿರುವುದರಿಂದ, ಮತ್ತು ಅರ್ಜಿಯನ್ನು ಅಂಗೀಕರಿಸಿ ಸದರಿ ಆದೇಶಗಳನ್ನು ಅನುಷ್ಠಾನಗೊಳಿಸಲು 15 ದಿನಗಳ ಕಾಲಾವಕಾಶವನ್ನು ನೀಡಲಾಯಿತು. ಸೇವಾ ಪರೀಕ್ಷೆ ಅಥವಾ ಕನ್ನಡ ಭಾಷಾ ಪರೀಕ್ಷೆಗಳನ್ನು ಅನುದಾನಿತ ಶಾಲಾ ಸಿಬ್ಬಂದಿಗಳಿಗೆ ನಿರ್ಬಂಧಗೊಳಿಸದೇ ಇರುವುದರಿಂದ, ಅನುದಾನಿತ ಶಾಲಾ ಸಿಬ್ಬಂದಿಗಳಿಗೆ ಸೇವಾ ಅಥವಾ ಕನ್ನಡ ಭಾಷಾ ಪರೀಕ್ಷೆ ಉತ್ತೀರ್ಣರಾದ ಕಾರಣ ಒಂದು ಹೆಚ್ಚುವರಿ ವೇತನ ಬಡ್ತಿಯನ್ನು ಮಂಜೂರು ಮಾಡವುದು ಸಮರ್ಥನೀಯವೆನಿಸುವುದಿಲ್ಲ. ಸರ್ಕಾರವು ಯಾವುದೇ ಕಾಲಕ್ಕೂ ಇದನ್ನು ಉದ್ದೇಶಿಸಿರುವುದಿಲ್ಲ. ಆದಾಗ್ಯೂ, SLP No. 38205–38772/2013ರಲ್ಲಿಯ ಮಾನ್ಯ ಸರ್ವೋಚ್ಚ ನ್ಯಾಯಾಲಯದ ಆದೇಶಕ್ಕೆ ಒಳಪಟ್ಟು, ಸರ್ಕಾರವು, ಮಾನ್ಯ ಉಚ್ಚ ನ್ಯಾಯಾಲಯದ ದಿನಾಂಕ:10.08.2012ರ ಆದೇಶವನ್ನು ಅನುಷ್ಠಾನಗೊಳಿಸಿ, ದಿನಾಂಕ:11.11.2013ರಂದು ಆದೇಶ ಸಂಖ್ಯೆ: ED 286 PMC 2013ನ್ನು ಹೊರಡಿಸಿದ್ದು, ತತ್ಪರಿಣಾಮವಾಗಿ ರಾಜ್ಯದ ಸಂಚಿತ ನಿಧಿಗೆ ಭಾರೀ ಆರ್ಥಿಕ ತೊಡಕು ಉಂಟಾಗಿರುವುದರಿಂದ;

ಮೇಲಿನ SLP No. 38205–38772/2013ರ ಅರ್ಜಿಗಳನ್ನು ದಿನಾಂಕ:06.01.2014 ರಂದು ವಜಾಗೊಳಿಸಲಾಯಿತು.

ಆದ್ದರಿಂದ, ಅನುದಾನಿತ ಶಿಕ್ಷಣ ಸಂಸ್ಥೆ ಸಿಬ್ಬಂದಿಗಳಿಗೆ ಸೇವಾ ಪರೀಕ್ಷೆಗಳು ಅಥವಾ ಕನ್ನಡ ಭಾಷೆ ಪರೀಕ್ಷೆಗಳನ್ನು ನಿಯಮಿಸದಿರುವುದರಿಂದ, ಸರ್ಕಾರಿ ಶಾಲೆಗಳಲ್ಲಿ ಕಾರ್ಯನಿರ್ವಹಿಸುವ ನೌಕರರ ಪ್ರಕರಣದಂತೆಯೇ ಅನುದಾನಿತ ಶಾಲೆಗಳಲ್ಲಿ ಕಾರ್ಯ ನಿರ್ವಹಿಸುವ ನೌಕರರಿಗೂ ಹೆಚ್ಚುವರಿ ವೇತನ ಸಂದಾಯ ಮಾಡುವುದನ್ನು ವಿಸ್ತರಿಸದಿರಲು ಸರ್ಕಾರವು ನಿರ್ಧರಿಸಿರುವುದರಿಂದ ವಿಷಯವನ್ನು ಪುನರ್ ಪರಿಶೀಲಿಸುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

ವಿಷಯವು ತುರ್ತು ಸ್ವರೂಪದ್ದಾಗಿದ್ದರಿಂದ ಹಾಗೂ ರಾಜ್ಯ ವಿಧಾನಮಂಡಲದ ಉಭಯ ಸದನಗಳು ಅಧಿವೇಶನದಲ್ಲಿಲ್ಲದಿದ್ದುದರಿಂದ ಕರ್ನಾಟಕ ಶಿಕ್ಷಣ (ತಿದ್ದುಪಡಿ) ಅಧ್ಯಾದೇಶ, 2014ನ್ನು (2014ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 1)ದಿನಾಂಕ:31.10.2014ರಂದು ಪ್ರಖ್ಯಾಪಿಸಲಾಯಿತು.

ಸದರಿ ಅಧ್ಯಾದೇಶಕ್ಕೆ ಬದಲಾಗಿ ಈ ವಿಧೇಯಕವನ್ನು ಮಂಡಿಸಲಾಗಿದೆ.

**ಅನುಬಂಧ**

**ಕರ್ನಾಟಕ ಶಿಕ್ಷಣ ಅಧಿನಿಯ, 1983ರ (1995ರ ಕರ್ನಾಟಕ ಅಧಿನಿಯಮ 01) ಉದ್ಧೃತ ಭಾಗ**

Xx xx XX

**87. ನೌಕರರ ಅರ್ಹತೆಗಳು ಮತ್ತು ಸೇವಾ ಷರತ್ತುಗಳು.–** ರಾಜ್ಯ ಸರ್ಕಾರವು, ಪೂರ್ವ ಪ್ರಕಟಣೆಯ ನಂತರ, ಮನ್ನಣೆ ಪಡೆದ ಖಾಸಗಿ ಶಿಕ್ಷಣ ಸಂಸ್ಥೆಗಳ ನೌಕರಿ ಭರ್ತಿ ಮತ್ತು ಸೇವಾ ಷರತ್ತುಗಳನ್ನು ನಿಯಂತ್ರಿಸುವುದಕ್ಕಾಗಿ (ಶಿಸ್ತುಪಾಲನೆಯ ವಿಷಯಕ್ಕೆ ಸಂಬಂಧಿಸಿದ ಹಕ್ಕುಗಳೂ ಸೇರಿದಂತೆ) ನಿಯಮಗಳನ್ನು ರಚಿಸಬಹುದು:

ಪರಂತು, ರಾಜ್ಯ ಸರ್ಕಾರದಿಂದ ನಿರ್ವಹಣಾ ಅನುದಾನವನ್ನು ಪಡೆಯುವ ಶಿಕ್ಷಣ ಸಂಸ್ಥೆಗಳ ನೌಕರರ ನೌಕರಿಭರ್ತಿಗೆ ಕನಿಷ್ಠ ಅರ್ಹತೆಗಳು, ನೌಕರಿ ಭರ್ತಿಯ ವಯಸ್ಸು ಮತ್ತು ನಿವೃತ್ತಿ ಹಾಗೂ ನಿವೃತ್ತಿ ಸೌಲಭ್ಯಗಳು ಅನ್ಯಥಾ ನಿಯಮಿಸಿರುವ ಹೊರತು ರಾಜ್ಯ ಸರ್ಕಾರದ ಸಂಸ್ಥೆಗಳಲ್ಲಿನ ಸಂವಾದಿ ಪ್ರವರ್ಗಗಳ ನೌಕರರು ಯಾರಾದರೂ ಇದ್ದರೆ ಅವರಿಗೆ ಅನ್ವಯವಾಗುವಂಥವೇ ಆಗಿರತಕ್ಕುದು.

Xx xx XX

**KARNATAKA LEGISLATIVE ASSEMBLY**

**FOURTEENTH LEGISLATIVE ASSEMBLY**

**SIXTH SESSION**

**(ADJOURNED MEETINGS)**

**THE KARNATAKA STATE CIVIL SERVICES (REGULATION OF TRANSFER OF TEACHERS) (AMENDMENT) BILL, 2015**

**(L.A. Bill No. 11 of 2015)**

A Bill further to amend the Karnataka State Civil Services (Regulation of transfer of teachers) Act, 2007.

Whereas it is expedient further to amend the Karnataka State Civil Services (Regulation of transfer of teachers) Act, 2007 (Karnataka Act No. 29 of 2007) for the purposes hereinafter appearing.

Be it enacted by the Karnataka State Legislature in the sixty-sixth year of the Republic of India, as follows:-

**1. Short title and commencement**.- (1) This Act may be called the Karnataka State Civil Services (Regulation of transfer of teachers) (Amendment) Act, 2015.

(2) It shall come into force at once.

**2. Amendment of section 5.-** In the Karnataka State Civil Services (Regulation of transfer of teachers) Act, 2007 (hereinafter referred to as the principal Act) in section 5, for the proviso, the following shall be substituted, namely:-

"Provided that the total number of such transfers in a unit of seniority shall not exceed five percent in the case of public interest transfers and three percent in the case of inter unit of seniority transfers, and totally it shall not exceed eight percent of the number of sanctioned posts of teachers in that cadre in that unit of seniority."

**3. Amendment of section 6.-** In section 6 of the principal Act, in sub-section (2), for clause (1), the following shall be substituted, namely:-

"(1) Where both the spouses are Government Servants and the teacher has served for atleast three years service in the existing unit of seniority may also be transferred to the place or nearby place of working of his/her spouse by counselling, depending upon the availability of clear vacancy not more than twice in service.

(1A) In case of mutual transfers subject to conditions that both teachers must have completed minimum period of three years of service; must be otherwise eligible to be transferred to that zone; must have minimum three years of left over service; such mutual transfers shall not be allowed more than once in his service and he shall not be eligible for protection of seniority".

**STATEMENT OF OBJECTS AND REASONS**

It is considered necessary to amend the Karnataka State Civil Services (Regulation of transfer of teachers) Act, 2007 to,-

(i) enhance the limit of transfers from 5% to 8% in public interest; and

(ii) relax the prohibition of transfer of teachers from one unit of seniority to another unit of seniority in cases of husband and wife and mutual transfers.

Hence, the Bill.

**FINANCIAL MEMORANDUM**

There is no extra expenditure involved in the proposed legislative measure.

**KIMMANE RATHNAKAR**
Minister for Primary and Secondary Education

**P. OMPRAKASHA**
Secretary
Karnataka Legislative Assembly

**ANNEXURE**

**THE KARNATAKA STATE CIVIL SERVICES (REGULATION OF TRANSFER OF TEACHERS) ACT, 2007**

**(KARNATAKA ACT NO. 29 OF 2007)**

**XXX XXX XXX**

**5. Transfer of teachers in the interest of public service.-**

**XXX XXX XXX**

Provided that the total number of such transfers in a unit of seniority shall not exceed five percent of the number of sanctioned posts of teachers in that cadre in that unit of seniority.

**6. Prohibition of transfer of a teacher from one unit of seniority to another unit of seniority.-**

**XXX XXX XXX**

(2) The provision of sub-section (1) shall be relaxed in the following cases, namely:-

(1) In the case of a married teacher, where the spouse is residing outside the unit of seniority then the other spouse may also be transferred once during his/her service outside that unit of seniority if he or she has completed not less than 3 years of service in the existing unit of seniority subject to availability of a clear vacancy;

**XXX XXX XXX**

# ವಿಶೇಷ ರಾಜ್ಯ ಪತ್ರಿಕೆ



| | | |
|---|---|---|
| ಭಾಗ – IV-A | ಬೆಂಗಳೂರು, ಗುರುವಾರ, ಮಾರ್ಚ್ ೨೬, ೨೦೧೫ (ಚೈತ್ರ ೦೫, ಶಕ ವರ್ಷ ೧೯೩೭) | ನಂ. ೨೩೭ |
| **Part – IV-A** | **Bengaluru, Thursday, March 26, 2015 (Chaithra 05, Shaka Varsha 1937)** | **No. 237** |



**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/12/LA Bill/2015, Bengaluru, Dated: 26-3-2015**

The following Bill was introduced in Legislative Assembly on 26-3-2015

**ಕರ್ನಾಟಕ ವಿಧಾನ ಸಭೆ**

**ಹದಿನಾಲ್ಕನೇ ವಿಧಾನ ಸಭೆ**

**ಆರನೇ ಅಧಿವೇಶನ**

**(ಮುಂದುವರೆದ ಉಪವೇಶನ)**

**ಉಚಿತ ಮತ್ತು ಕಡ್ಡಾಯ ಶಿಕ್ಷಣ ಪಡೆಯಲು ಮಕ್ಕಳ ಹಕ್ಕು (ಕರ್ನಾಟಕ ತಿದ್ದುಪಡಿ) ವಿಧೇಯಕ, 2015**

**(2015ರ ವಿಧಾನಸಭೆಯ ವಿಧೇಯಕ ಸಂಖ್ಯೆ – 12)**

ಉಚಿತ ಮತ್ತು ಕಡ್ಡಾಯ ಶಿಕ್ಷಣ ಪಡೆಯಲು ಮಕ್ಕಳ ಹಕ್ಕು ಅಧಿನಿಯಮ, 2009ನ್ನು ಕರ್ನಾಟಕ ರಾಜ್ಯಕ್ಕೆ ಅನ್ವಯಿಸುವಲ್ಲಿ ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

21ಎ ಅನುಚ್ಛೇದದ ಅಡಿಯಲ್ಲಿ ಎಲ್ಲ ಮಕ್ಕಳಿಗೆ ಪ್ರಾಥಮಿಕ ಹಂತದಲ್ಲಿ ಅವರ ಮಾತೃಭಾಷೆಯಲ್ಲಿ ಸಮಾನ ಶಿಕ್ಷಣದ ಅವಕಾಶವನ್ನು ಕಲ್ಪಿಸುವುದಕ್ಕಾಗಿ, ಉಚಿತ ಮತ್ತು ಕಡ್ಡಾಯ ಶಿಕ್ಷಣ ಪಡೆಯಲು ಮಕ್ಕಳ ಹಕ್ಕು ಅಧಿನಿಯಮ, 2009ನ್ನು (2009ರ ಕೇಂದ್ರ ಅಧಿನಿಯಮ 35) ಕರ್ನಾಟಕ ರಾಜ್ಯಕ್ಕೆ ಅನ್ವಯಿಸುವಲ್ಲಿ ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಭಾಷೆಯ ಆಧಾರದ ಮೇಲೆ ರಚನೆಯಾದ ರಾಜ್ಯಗಳ ಆಧಾರಿತ ಒಕ್ಕೂಟ ವ್ಯವಸ್ಥೆಯನ್ನು ಉಳಿಸಿಕೊಳ್ಳುವುದು ಅತ್ಯಂತ ಪ್ರಮುಖವಾಗಿರುವುದರಿಂದ;

2013ರ ಸಿವಿಲ್ ಅಪೀಲು ಸಂಖ್ಯೆ:5166–5190 ಮತ್ತು ಸಂಬಂಧಿತ ವಿಷಯಗಳಲ್ಲಿ ಮಾನ್ಯ ಸರ್ವೋಚ್ಚ ನ್ಯಾಯಾಲಯದ ಸಂವಿಧಾನ ಪೀಠವು ಒತ್ತುಗೊಟ್ಟು ಘೋಷಿಸಿರುವುದರಿಂದ;

"ಒಂದು ಮಗುವು ರಾಜ್ಯದಿಂದ ಕ್ಲೇಮು ಮಾಡಬಹುದಾದ ಅಂಥ ಉಚಿತ ಶಿಕ್ಷಣವು, ರಾಜ್ಯವು, ಕಾನೂನಿನ ಮೂಲಕ, ನಿರ್ದಿಷ್ಟಪಡಿಸಹುದಾದ ವಿಧಾನದಲ್ಲಿರಬೇಕು ಎಂಬುದನ್ನು ಸಂವಿಧಾನದ 21ಎ ಅನುಚ್ಛೇದವು ಮತ್ತಷ್ಟು ಸ್ಪಷ್ಟಪಡಿಸುತ್ತದೆ. ಆದ್ದರಿಂದ, ಸಂವಿಧಾನದ 21ಎ ಅನುಚ್ಛೇದದ ಅಡಿಯಲ್ಲಿ ಉಚಿತ ಶಿಕ್ಷಣವನ್ನು ಕಲ್ಪಿಸಲಾಗುತ್ತಿರುವ ಶಾಲೆಗಳಲ್ಲಿ ಶಿಕ್ಷಣ ಮಾಧ್ಯಮವು ಮಾತೃಭಾಷೆಯಲ್ಲಿ ಅಥವಾ ಇತರ ಯಾವುದೇ ಭಾಷೆಗಳಲ್ಲಿ ಇರತಕ್ಕದ್ದೆಂದು, ರಾಜ್ಯವು ಕಾನೂನಿನ ಮೂಲಕ ನಿರ್ಧರಿಸಿದರೆ, ಒಂದು ಮಗುವು ತಾನು ಆಯ್ಕೆ ಮಾಡಿಕೊಂಡ ಮಾಧ್ಯಮದಲ್ಲಿ ರಾಜ್ಯವು ಶಿಕ್ಷಣವನ್ನು ನೀಡಬೇಕೆಂದು ಸಂವಿಧಾನದ ಅನುಚ್ಛೇದ 21 ಅಥವಾ ಅನುಚ್ಛೇದ 21ಎ ಅಡಿಯಲ್ಲಿ ಕ್ಲೇಮು ಮಾಡುವಂತಿಲ್ಲ."

ಆದ್ದರಿಂದ, ಹಾಗೂ ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ;

ಇದು ಭಾರತ ಗಣರಾಜ್ಯದ ಅರವತ್ತಾರನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.**– (1) ಈ ಅಧಿನಿಯಮವನ್ನು ಉಚಿತ ಮತ್ತು ಕಡ್ಡಾಯ ಶಿಕ್ಷಣ ಪಡೆಯಲು ಮಕ್ಕಳ ಹಕ್ಕು (ಕರ್ನಾಟಕ ತಿದ್ದುಪಡಿ) ಅಧಿನಿಯಮ, 2015 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು. **2. 29ನೇ ಪ್ರಕರಣದ ತಿದ್ದುಪಡಿ.**– ಉಚಿತ ಮತ್ತು ಕಡ್ಡಾಯ ಶಿಕ್ಷಣ ಪಡೆಯಲು ಮಕ್ಕಳ ಹಕ್ಕು ಅಧಿನಿಯಮ, 2009ರ (2009ರ ಕೇಂದ್ರ ಅಧಿನಿಯಮ 35) 29ನೇ ಪ್ರಕರಣದ (2)ನೇ ಉಪಪ್ರಕರಣದ (ಎಫ್) ಖಂಡದಲ್ಲಿ "ಸಾಧ್ಯವಾಗಬಹುದಾದಷ್ಟು ಮಟ್ಟಿಗೆ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

1994ರಲ್ಲಿ ರಾಜ್ಯ ಸರ್ಕಾರವು 1ನೇ ತರಗತಿಯಿಂದ 5ನೇ ತರಗತಿಯವರೆಗೆ ಮಾಧ್ಯಮದ ಬಗ್ಗೆ ಭಾಷಾ ನೀತಿಯನ್ನು ರಚಿಸಿತು. ದಿನಾಂಕ:29.04.1994ರ ಸರ್ಕಾರಿ ಆದೇಶ ಸಂಖ್ಯೆ: ಇಡಿ 24 ಪಿಜಿಸಿ 1994ರಲ್ಲಿ ರಾಜ್ಯ ಸರ್ಕಾರವು 1994–95ನೇ ಶೈಕ್ಷಣಿಕ ವರ್ಷದಿಂದ ರಾಜ್ಯ ಸರ್ಕಾರವು ಮಾನ್ಯತೆ ನೀಡಿದ ಎಲ್ಲಾ ಶಾಲೆಗಳಲ್ಲಿ ಮಾತೃಭಾಷೆ ಅಥವಾ ಕನ್ನಡವನ್ನು ಶಿಕ್ಷಣದ ಮಾಧ್ಯಮವಾಗಿರಬೇಕೆಂದು ಆದೇಶಿಸಿದೆ.

ಆದರೆ, ಕೆಲವು ಖಾಸಗಿ ಶಾಲೆಗಳು, ಕನ್ನಡ ಮಾಧ್ಯಮದಲ್ಲಿ ಶಾಲೆಯನ್ನು ನಡೆಸುವುದಕ್ಕೆ ಅನುಮತಿಯನ್ನು ಪಡೆದಿದ್ದು ಭಾಷಾ ನೀತಿಯನ್ನು ಉಲ್ಲಂಘಿಸಿ ಆಂಗ್ಲ ಮಾಧ್ಯಮದಲ್ಲಿ ನಡೆಸುತ್ತಿವೆ.

ಕರ್ನಾಟಕ ರಾಜ್ಯ ಅನುದಾನರಹಿತ ಶಾಲಾ ವ್ಯವಸ್ಥಾಪನಾ ಸಂಘಟನೆಯು ಭಾಷಾ ನೀತಿಯನ್ನು ನ್ಯಾಯಾಲಯದಲ್ಲಿ ವಿವಿಧ ಹಂತಗಳಲ್ಲಿ ಪ್ರಶ್ನಿಸಿದೆ. ಕರ್ನಾಟಕದ ಮಾನ್ಯ ಉಚ್ಚನ್ಯಾಯಾಲಯದ ಪೂರ್ಣಪೀಠವು ದಿನಾಂಕ:02.07.2008ರ ರಿಟ್‌ಪಿಟಿಷನ್ ಸಂಖ್ಯೆ: 14863/1994 (ಶಿಕ್ಷಣ)ರ ದಿನಾಂಕ: 24.04.1994ರ ಸರ್ಕಾರಿ ಆದೇಶ ಸಂಖ್ಯೆ: ಇಡಿ 24 ಪಿಜಿಸಿ 1994ನ್ನು ರದ್ದುಪಡಿಸಿದೆ.

ದಿನಾಂಕ:02.07.2008ರ ಆದೇಶವನ್ನು ರಾಜ್ಯಸರ್ಕಾರವು ರಿಟ್‌ಪಿಟಿಷನ್ ಸಂಖ್ಯೆ: 290/2009ರಲ್ಲಿ ಭಾರತದ ಸನ್ಮಾನ್ಯ ಸರ್ವೋಚ್ಛ ನ್ಯಾಯಾಲಯದ ಮುಂದೆ ಮೇಲಿನ ಪ್ರಶ್ನಿಸಿತು. ಸನ್ಮಾನ್ಯ ಸರ್ವೋಚ್ಛ ನ್ಯಾಯಾಲಯವು ಯಥಾಸ್ಥಿತಿಯನ್ನು ಕಾಪಾಡುವಂತೆ ನಿರ್ದೇಶಿಸಿ ದಿನಾಂಕ:21.07.2009ರಲ್ಲಿ ಮಧ್ಯಂತರ ಆದೇಶವನ್ನು ಹೊರಡಿಸಿತು. ತದನಂತರ 05.07.2013ರಂದು ಪ್ರಕರಣವನ್ನು ಸಂವಿಧಾನಿಕ ಪೀಠಕ್ಕೆ ವರ್ಗಾಯಿಸಲಾಯಿತು. ದಿನಾಂಕ:06.05.2014ರ ಸಿವಿಲ್ ಅಪೀಲು ಸಂಖ್ಯೆ: 5166–5190/2013ರಲ್ಲಿ ಸನ್ಮಾನ್ಯ ಸರ್ವೋಚ್ಛ ನ್ಯಾಯಾಲಯವು "ಸರ್ಕಾರವು ಪ್ರಾಥಮಿಕ ಹಂತದಲ್ಲಿ ಮಕ್ಕಳಿಗೆ ಕಲಿಸುವುದಕ್ಕಾಗಿ ಮಾತೃಭಾಷೆಯನ್ನು ಹೇರುವಂತಿಲ್ಲ" ಎಂದು ಆದೇಶಿಸಿದೆ.

ಪ್ರಸ್ತುತ ಪರಿಸ್ಥಿತಿಯಲ್ಲಿ, ಭಾರತದ ಸನ್ಮಾನ್ಯ ಸರ್ವೋಚ್ಛ ನ್ಯಾಯಾಲಯವು ರಾಜ್ಯದ ಭಾಷಾ ನೀತಿಯನ್ನು ತಿರಸ್ಕರಿಸಿರುವುದರಿಂದ, ರಾಜ್ಯ ಸರ್ಕಾರವು ರಿವ್ಯೂ ಪಿಟಿಷನ್ ಸಂಖ್ಯೆ: 1878–1911/2014ನ್ನು ಸಲ್ಲಿಸಿದೆ. ದಿನಾಂಕ:09.09.2014ರಂದು ರಿಟ್ ಪಿಟಿಷನ್‌ನ್ನು ವಜಾಗೊಳಿಸಲಾಯಿತು.

ಸಂವಿಧಾನದ 350ಎ ಅನುಚ್ಛೇದವು ಈ ಮುಂದಿನಂತಿದೆ:–

"**350ಎ. ಪ್ರಾಥಮಿಕ ಹಂತದಲ್ಲಿ ಮಾತೃಭಾಷೆಯಲ್ಲಿ ಶಿಕ್ಷಣ ಸೌಲಭ್ಯಗಳು:**- ಭಾಷಾ ಅಲ್ಪಸಂಖ್ಯಾತ ವರ್ಗಗಳಿಗೆ ಸೇರಿದ ಮಕ್ಕಳಿಗೆ ವಿದ್ಯಾಭ್ಯಾಸದ ಪ್ರಾಥಮಿಕ ಹಂತದಲ್ಲಿ ಮಾತೃಭಾಷೆಯಲ್ಲಿ ಶಿಕ್ಷಣಕ್ಕಾಗಿ ಸಾಕಷ್ಟು ಸೌಲಭ್ಯಗಳನ್ನು ಒದಗಿಸಲು ಪ್ರತಿಯೊಂದು ರಾಜ್ಯವು ಮತ್ತು ಆ ರಾಜ್ಯದಲ್ಲಿನ ಪ್ರತಿಯೊಂದು ಸ್ಥಳೀಯ ಪ್ರಾಧಿಕಾರವೂ ಪ್ರಯತ್ನಿಸತಕ್ಕದ್ದು ಮತ್ತು ಅಂಥ ಸೌಲಭ್ಯಗಳನ್ನು ಒದಗಿಸುವುದನ್ನು ಸುನಿಶ್ಚಿತಗೊಳಿಸುವುದಕ್ಕಾಗಿ ರಾಷ್ಟ್ರಪತಿಯು ತಾನು ಅವಶ್ಯವೆಂದು ಅಥವಾ ಯುಕ್ತವೆಂದು ಭಾವಿಸುವಂಥ ನಿರ್ದೇಶನಗಳನ್ನು ಯಾವುದೇ ರಾಜ್ಯಕ್ಕೆ ಕೊಡಬಹುದು."

ಸಂವಿಧಾನದ 350ಎ ಅನುಚ್ಛೇದದ ಅನ್ವಯ ಮಗುವಿಗೆ ಆತನ/ಆಕೆಯ ಮಾತೃಭಾಷೆಯಲ್ಲಿ ಪ್ರಾಥಮಿಕ ಶಾಲಾ ಶಿಕ್ಷಣವನ್ನು ಒದಗಿಸುವುದು ಸಂಬಂಧಪಟ್ಟ ರಾಜ್ಯಗಳ ಸಂವಿಧಾನಿಕ ಕರ್ತವ್ಯವಾಗಿದೆ. ಇದನ್ನು ಶಿಕ್ಷಣ ತಜ್ಞರು, ಬುದ್ಧಿಜೀವಿಗಳು ಮತ್ತು ಬರಹಗಾರರೊಂದಿಗೆ ಸವಿಸ್ತಾರವಾಗಿ ಚರ್ಚಿಸಲಾಗಿ ಅವರು ಮಾತೃಭಾಷೆಯಲ್ಲಿ ಪ್ರಾಥಮಿಕ ಶಿಕ್ಷಣದ ಅವಶ್ಯಕತೆಯನ್ನು ಅವಿರೋಧವಾಗಿ ಒಪ್ಪಿದ್ದಾರೆ.

ಆದುದರಿಂದ, ರಾಜ್ಯದಲ್ಲಿ ಮಗುವಿನ ಮಾತೃಭಾಷೆ ಅಥವಾ ಕನ್ನಡದಲ್ಲಿ ಪ್ರಾಥಮಿಕ ಶಿಕ್ಷಣ (1ನೇ ತರಗತಿಯಿಂದ 5ನೇ ತರಗತಿಯವರೆಗೆ) ಒದಗಿಸಲು ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ಪಡೆಯಲು ಮಕ್ಕಳ ಹಕ್ಕು ಅಧಿನಿಯಮ, 2009ಕ್ಕೆ (2009ರ ಕೇಂದ್ರ ಅಧಿನಿಯಮ 35) ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಕಿಮ್ಮನೆ ರತ್ನಾಕರ**

ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

**ಪಿ. ಓಂಪ್ರಕಾಶ**

ಕಾರ್ಯದರ್ಶಿ

ಕರ್ನಾಟಕ ವಿಧಾನ ಸಭೆ

**ಅನುಬಂಧ**

**ಉಚಿತ ಮತ್ತು ಕಡ್ಡಾತ ಶಿಕ್ಷಣ ಪಡೆಯಲು ಮಕ್ಕಳ ಹಕ್ಕು ಅಧಿನಿಯಮ, 2009ರ**

**(2009ರ ಕೇಂದ್ರ ಅಧಿನಿಯಮ 35) ಉದ್ಧೃತ ಭಾಗ**

**29. ಪಠ್ಯ ವಿಷಯ ಮತ್ತು ಮೌಲ್ಯಮಾಪನಾ ಪ್ರಕ್ರಿಯೆ.**- (1) ಪ್ರಾಥಮಿಕ ಶಿಕ್ಷಣದ ಪಠ್ಯ ವಿಷಯವನ್ನು ಮತ್ತು ಮೌಲ್ಯಮಾಪನ ಪ್ರಕ್ರಿಯೆಯನ್ನು, ಸಮುಚಿತ ಸರ್ಕಾರವು, ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸುವ ಶೈಕ್ಷಣಿಕ ಪ್ರಾಧಿಕಾರವು ಗೊತ್ತುಪಡಿಸತಕ್ಕದ್ದು.

(2) ಶೈಕ್ಷಣಿಕ ಪ್ರಾಧಿಕಾರವು, (1)ನೇ ಉಪ-ಪ್ರಕರಣದ ಮೇರೆಗೆ ಪಠ್ಯ ವಿಷಯವನ್ನು ಮತ್ತು ಮೌಲ್ಯಮಾಪನ ಪ್ರಕ್ರಿಯೆಯನ್ನು ಗೊತ್ತುಪಡಿಸುವಾಗ, ಈ ಮುಂದಿನವುಗಳನ್ನು ಪರಿಗಣಿಸತಕ್ಕದ್ದು, ಎಂದರೆ:-

(ಎ) ಸಂವಿಧಾನದಲ್ಲಿ ಹೇಳಿರುವ ಮೌಲ್ಯಗಳಿಗೆ ಅನುಗುಣವಾಗಿರುವುದು;

(ಬಿ) ಮಕ್ಕಳ ಸರ್ವಾಂಗೀಣ ಅಭಿವೃದ್ಧಿ;

(ಸಿ) ಮಕ್ಕಳ ಜ್ಞಾನ, ಸಾಮರ್ಥ್ಯ ಮತ್ತು ಪ್ರತಿಭೆಯ ವರ್ಧನೆ;

(ಡಿ) ಪೂರ್ಣ ಪ್ರಮಾಣದಲ್ಲಿ ದೈಹಿಕ ಮತ್ತು ಮಾನಸಿಕ ಸಾಮರ್ಥ್ಯಗಳ ವಿಕಸನ;

(ಇ) ಮಗು ಸ್ನೇಹೀ ಮತ್ತು ಮಗು ಕೇಂದ್ರಿತ ವಾತಾವರಣದಲ್ಲಿ ಚಟುವಟಿಕೆಗಳು, ಶೋಧನೆಮತ್ತು ಅನ್ವೇಷಣೆ ಮೂಲಕ ಕಲಿಕೆ;

(ಎಫ್) ಶಿಕ್ಷಣ ಮಾಧ್ಯಮವು ಸಾಧ್ಯವಾಗಬಹುದಾದಷ್ಟು ಮಟ್ಟಿಗೆ ಮಕ್ಕಳ ಮಾತೃಭಾಷೆಯಲ್ಲಿರತಕ್ಕದ್ದು;

(ಜಿ) ಮಗುವಿನ ಭಯವನ್ನು, ಆಘಾತವನ್ನು ಹಾಗೂ ಆತಂಕವನ್ನು ಹೋಗಲಾಡಿಸುವುದು ಮತ್ತು ಮಗು ಮುಕ್ತವಾಗಿ ತನ್ನ ಅನಿಸಿಕೆಗಳನ್ನು ಹೇಳಿಕೊಳ್ಳುವುದಕ್ಕೆ ನೆರವಾಗುವುದು;

(ಎಚ್) ಮಗುವಿನ ಜ್ಞಾನದ ಗ್ರಹಿಕೆಯನ್ನು ಮತ್ತು ಅದನ್ನು ಅನ್ವಯಿಸುವುದಕ್ಕೆ ಆತ ಅಥವಾ ಆಕೆ ಹೊಂದಿರುವ ಸಾಮರ್ಥ್ಯವನ್ನು ಸಮಗ್ರವಾಗಿ ಹಾಗೂ ನಿರಂತರವಾಗಿ ಮೌಲ್ಯ ಮಾಪನ ಮಾಡುವುದು.

XXX XXX XXX XXX XXX

**KARNATAKA LEGISLATIVE ASSEMBLY**

**FOURTEENTH LEGISLATIVE ASSEMBLY**

**SIXTH SESSION**

**(ADJOURNED MEETINGS)**

**THE RIGHT OF CHILDREN TO FREE AND COMPULSORY EDUCATION (KARNATAKA AMENDMENT) BILL, 2015**

**(L.A. Bill No. 12 of 2015)**

A Bill further to amend the Right of Children to Free and Compulsory Education Act, 2009 in its application to the State of Karnataka.

Whereas it is expedient further to amend the Right of Children to Free and Compulsory Education Act, 2009 (Central Act 35 of 2009), in its application to the State of Karnataka, in order to provide equal education to all children in their mother tongue at primary stage, as a fundamental right under Article 21A of the constitution;

Whereas it is of utmost importance to sustain the federal structure based on the formation of States on the basis of language;

Whereas the Constitution Bench of the Hon'ble Supreme Court in Civil Appeal Nos. 5166 – 5190 of 2013 and connected matters, has emphatically declared;

> "The language of Article 21A of the Constitution further makes it clear that such free education which a child can claim from the State will be in a manner as the State may, by law, determined. If therefore, the State determines by law that in schools where free education is provided under Article 21A of the Constitution, the medium of instruction would be in the mother tongue or in any language, the child cannot claim as of right under Article 21 or Article 21A of the constitution that he has a right to choose the medium of instruction in which the education should be imparted to him by the State."

Now therefore, and for the purposes hereinafter appearing;

Be it enacted by the Karnataka State Legislature in the sixty sixth year of the Republic of India as follows:-

**1. Short title and Commencement .-** (1) This Act may be called the Right of Children to Free and Compulsory Education (Karnataka Amendment) Act, 2015.

(2) It shall come into force at once.

**2. Amendment of Section 29.-** In section 29 of the Right of children to free and compulsory education Ac, 2009 (Central Act 35 of 2009), in sub section (2), in clause (f), the words and punctuation mark "as far as practicable," shall be omitted.

**STATEMENT OF OBJECTS AND REASON**

The State Government constituted the language policy regarding the medium of instruction from 1st std to 5th std in 1994. In Government order No. ED 24 PGC 1994 dated 29.04.1994 the State Government ordered that the mother tongue or Kannada as the medium of instruction in all schools recognized by the State Government from the academic year 1994-95.

But, some private schools had taken permission to run the school in Kannada medium and are running in English medium, by violating the language policy.

Karnataka State unaided School Management Association has Questioned the language policy in different stages in the court. The full bench of the Hon'ble High court of Karnataka has quashed the Government order No. ED 24 PGC 1994, dated 24.4.1994 in W.P.No 14863/1994 (Education) dated 2.7.2008.

State Government questioned the above order dated 2.7.2008 before the Hon'ble Supreme Court of India vide WP No. 290/2009. The Hon'ble Supreme Court has issued an interim order dated 21.07.2009, directing to maintain the statues quo. The case was then transferred to the Constitutional Bench on 5.7.2013. The Hon'ble Supreme Court in Civil Appeal No. 5166-5190/2013 dated 6.5.2014 has ordered that "government cannot impose mother tongue for teaching children at primary level".

In the present situation, as the language policy of the State was rejected by the Hon'ble Supreme Court of India, the State Government has filed a Review Petition No. 1878-1911/2014. The Review Petition was dismissed on 9.9.2014.

Article 350A of Constitution is as follows:-

350A. facilities for instruction in mother-tongue at primary stage.- It shall be the endeavour of every State and of every local authority within the State to provide adequate facilities for instruction in the mother-tongue at the primary stage of education to children belonging to linguistic minority groups; and the President may issue such directions to any State as he considers necessary or proper for securing the provision of such facilities.

It is the constitutional duty of the concerned states to provide primary school education to the child in his/her mother tongue as per the Article 350A of the constitution. It was discussed in detail with Educationists, intellectuals and writers who unanimously opined the necessity of primary education in mother tongue.

Therefore, it is considered necessary to amend the Right of children to Free and Compulsory Education Act, 2009, (a Central Act 35 of 2009) to provide Primary Education (1st Std to 5th Std) in Child's mother tongue or in Kannada" in the State.

Hence the Bill.

**FINANCIAL MEMORANDUM**

There is no extra expenditure involved in the proposed legislative measure.

**KIMMANE RATHNAKAR**
Minister for Primary and Secondary Education

**P. OMPRAKASHA**
Secretary
Karnataka Legislative Assembly

**ANNEXURE**

**THE RIGHT OF CHILDREN TO FREE AND COMPULSORY EDUCATION ACT, 2009**
**(Central Act No. 35 of 2009)**

**XXX XXX XXX**

**29. Curriculum and evaluation procedure:** (1) The curriculum and the evaluation procedure for elementary education shall be laid down by an academic authority to be specified by the appropriate Government, by notification.

(2) The academic authority, while laying down the curriculum and the evaluation procedure under sub-section (1), shall take into consideration the following, namely:-

(a) conformity with the values enshrined in the Constitution ;

(b) all round development of the child;

(c) building up child's knowledge, potentiality and talent;

(d) development of physical and mental abilities to the fullest extent;

(e) learning through activities discovery and exploration in a child friendly and child- cantered manner

(f) medium of instruction shall, as far as practicable, be in child's mother tongue;

(g) making the child free of fear trauma and anxiety and helping the child to express views freely;

(h) Comprehensive and continuous evaluation of child's understanding of knowledge and his or her ability to apply the same.

**XXX XXX XXX**

# ವಿಶೇಷ ರಾಜ್ಯ ಪತ್ರಿಕೆ


| ಭಾಗ – IV-A | ಬೆಂಗಳೂರು, ಗುರುವಾರ, ಮಾರ್ಚ್ ೨೬, ೨೦೧೫ (ಚೈತ್ರ ೦೫, ಶಕ ವರ್ಷ ೧೯೩೭) | ನಂ. ೨೩೮ |
|---|---|---|
| Part – IV-A | Bengaluru, Thursday, March 26, 2015 (Chaithra 05, Shaka Varsha 1937) | No. 238 |


**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/10/LA Bill/2015, Bengaluru, Dated: 26-3-2015**

The following Bill was introduced in Legislative Assembly on 26-3-2015

**ಕರ್ನಾಟಕ ವಿಧಾನ ಸಭೆ**

**ಹದಿನಾಲ್ಕನೇ ವಿಧಾನ ಸಭೆ**

**ಆರನೇ ಅಧಿವೇಶನ**

**(ಮುಂದುವರೆದ ಉಪವೇಶನ)**

**ಕನ್ನಡ ಭಾಷಾ ಕಲಿಕೆ ವಿಧೇಯಕ, 2015**

**(2015ರ ವಿಧಾನಸಭೆಯ ವಿಧೇಯಕ ಸಂಖ್ಯೆ – 10)**

ಕರ್ನಾಟಕ ರಾಜ್ಯದಲ್ಲಿನ ಎಲ್ಲಾ ಶಾಲೆಗಳಲ್ಲಿ ಕನ್ನಡವನ್ನು ಒಂದು ಭಾಷೆಯನ್ನಾಗಿ ಕಲಿಯುವುದನ್ನು ಉಪಬಂಧಿಸಲು ಮತ್ತು ಖಚಿತಪಡಿಸಿಕೊಳ್ಳಲು ಒಂದು ವಿಧೇಯಕ.

ರಾಜ್ಯದಲ್ಲಿ ಎಲ್ಲಾ ಶಾಲೆಗಳಲ್ಲಿ 1ರಿಂದ 10ನೇ ತರಗತಿಗಳವರೆಗೂ ವ್ಯಾಸಂಗ ಮಾಡುತ್ತಿರುವ ಎಲ್ಲಾ ವಿದ್ಯಾರ್ಥಿಗಳಿಗೆ 2015–16ನೇ ಶೈಕ್ಷಣಿಕ ವರ್ಷದಿಂದ ಹಂತಹಂತವಾಗಿ ಕನ್ನಡವನ್ನು ಒಂದು ಭಾಷೆಯನ್ನಾಗಿ ಕಲಿಯುವುದನ್ನು ಖಚಿತಪಡಿಸಿಕೊಳ್ಳಲು ಕರ್ನಾಟಕ ಸರ್ಕಾರವು ಒಂದು ನೀತಿ ನಿರ್ಣಯವನ್ನು ತೆಗೆದುಕೊಂಡಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತಾರನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.**– (1) ಈ ಅಧಿನಿಯಮವನ್ನು ಕನ್ನಡ ಭಾಷಾ ಕಲಿಕೆ ಅಧಿನಿಯಮ, 2015 ಎಂದು ಕರೆಯತಕ್ಕದ್ದು.

(2) ಇದು ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದ ಅಂಥ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.**– ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) "ಶೈಕ್ಷಣಿಕ ವರ್ಷ" ಎಂದರೆ, ಜೂನ್ ಮೊದಲ ದಿನಾಂಕದಿಂದ ಪ್ರಾರಂಭವಾಗುವ ವರ್ಷ;

(ಬಿ) "ಸಕ್ಷಮ ಪ್ರಾಧಿಕಾರಿ" ಎಂದರೆ, 4ನೇ ಪ್ರಕರಣದ ಅಡಿಯಲ್ಲಿ ಸರ್ಕಾರವು ನೇಮಿಸಿದ ಸಕ್ಷಮ ಪ್ರಾಧಿಕಾರಿ;

(ಸಿ) "ಸರ್ಕಾರ" ಎಂದರೆ, ರಾಜ್ಯ ಸರ್ಕಾರ;

(ಡಿ) "ನಿಯಮಿಸಲಾದ" ಎಂದರೆ, ನಿಯಮಗಳ ಮೂಲಕ ನಿಯಮಿಸಲಾದುದು;

(ಇ) "ಶಾಲೆ" ಎಂದರೆ,–

(i) ರಾಜ್ಯ ಸರ್ಕಾರ ಅಥವಾ ಸ್ಥಳೀಯ ನಿಕಾಯಗಳಿಂದ ಸ್ಥಾಪಿತವಾದ ಮತ್ತು ನಿರ್ವಹಿಸಲ್ಪಡುತ್ತಿರುವ ಯಾವುದೇ ಪ್ರಾಥಮಿಕ ಶಾಲೆ, ಮಾಧ್ಯಮಿಕ ಶಾಲೆ, ಪ್ರೌಢ ಶಾಲೆ ಅಥವಾ ಉನ್ನತ ಪ್ರೌಢ ಶಾಲೆ; ಅಥವಾ

(ii) ರಾಜ್ಯ ನಿಧಿಯಿಂದ ಅನುದಾನವನ್ನು ಪಡೆಯುತ್ತಿರಲಿ ಅಥವಾ ಇಲ್ಲದಿರಲಿ, ಭಾರತ ಸಂವಿಧಾನದ 30ನೇ ಅನುಚ್ಛೇದದ (1)ನೇ ಖಂಡದ ಅಡಿಯಲ್ಲಿ ಸ್ಥಾಪಿತವಾಗಿರುವ ಮತ್ತು ನಿರ್ವಹಿಸುತ್ತಿರುವ ಅಲ್ಪಸಂಖ್ಯಾತರ ಶಾಲೆಯನ್ನು ಒಳಗೊಂಡಂತೆ ಯಾವುದೇ ಖಾಸಗಿ ಶೈಕ್ಷಣಿಕ ಏಜೆನ್ಸಿಯು ಸ್ಥಾಪಿಸಿರುವ ಮತ್ತು ನಿರ್ವಹಿಸುತ್ತಿರುವ ಯಾವುದೇ ಪ್ರಾಥಮಿಕ ಶಾಲೆ, ಮಾಧ್ಯಮಿಕ ಶಾಲೆ, ಪ್ರೌಢ ಶಾಲೆ ಅಥವಾ ಉನ್ನತ ಪ್ರೌಢ ಶಾಲೆ; ಅಥವಾ

(iii) ರಾಜ್ಯದ ನಿಧಿಯಿಂದ ಅನುದಾನವನ್ನು ಪಡೆಯುತ್ತಿರಲಿ ಅಥವಾ ಇಲ್ಲದಿರಲಿ, ಭಾರತ ಸಂವಿಧಾನದ 30ನೇ ಅನುಚ್ಛೇದದ (1)ನೇ ಖಂಡದ ಅಡಿಯಲ್ಲಿ ಸ್ಥಾಪಿತವಾಗಿರುವ ಮತ್ತು ನಿರ್ವಹಿಸುತ್ತಿರುವ ಅಲ್ಪಸಂಖ್ಯಾತರ ಶಾಲೆಯನ್ನು ಒಳಗೊಂಡಂತೆ ಯಾವುದೇ ಪೂರ್ವಪ್ರಾಥಮಿಕ (ನರ್ಸರಿ) ಮತ್ತು ಪ್ರಾಥಮಿಕ ಶಾಲೆ, ಮೆಟ್ರಿಕ್ಯುಲೇಷನ್ ಶಾಲೆ, ಆಂಗ್ಲೋ ಇಂಡಿಯನ್ ಶಾಲೆ ಅಥವಾ ಓರಿಯಂಟಲ್ ಶಾಲೆ; ಅಥವಾ

(iv) ಈ ಸಂಬಂಧದಲ್ಲಿ ಸರ್ಕಾರವು ಅಧಿಸೂಚಿಸಬಹುದಾದ ಅಂಥ ಇತರ ಶಾಲೆ.

**ವಿವರಣೆ.**– ಈ ಖಂಡದ ಉದ್ದೇಶಕ್ಕಾಗಿ,–

(1) ಪೂರ್ವ ಪ್ರಾಥಮಿಕದಿಂದ ಹತ್ತನೇ ತರಗತಿಯವರೆಗೆ ಯಾವುದೇ ತರಗತಿಗಳನ್ನು ಹೊಂದಿರುವ ಒಂದು ಶಾಲೆಯನ್ನು ಈ ಅಧಿನಿಯಮದ ಉದ್ದೇಶಕ್ಕಾಗಿ ಒಂದು ಶಾಲೆ ಎಂದು ಪರಿಗಣಿಸಲಾಗಿದೆ.

(2) ಈ ಅಧಿನಿಯಮದಲ್ಲಿ ಉಪಯೋಗಿಸಿರುವ ಆದರೆ ಪರಿಭಾಷಿಸದಿರುವ ಪದ ಮತ್ತು ಪದಾವಳಿಗಳು ಕರ್ನಾಟಕ ಶಿಕ್ಷಣ ಅಧಿನಿಯಮ, 1983ರಲ್ಲಿ (1995ರ ಕರ್ನಾಟಕ ಅಧಿನಿಯಮ 1), ಅವುಗಳಿಗೆ ಗೊತ್ತುಪಡಿಸಿದ ಅರ್ಥವನ್ನು ಹೊಂದಿರತಕ್ಕದ್ದು.

**3. ಕಡ್ಡಾಯ ಭಾಷೆಯಾಗಿ ಕನ್ನಡ.**– (1) ರಾಜ್ಯದಲ್ಲಿನ ಎಲ್ಲಾ ಶಾಲೆಗಳಲ್ಲಿ, ಎಲ್ಲಾ ತರಗತಿಗಳಲ್ಲಿ ಪ್ರಥಮ ಭಾಷೆಯಾಗಿ ಆಗಲೀ ಅಥವಾ ದ್ವಿತೀಯ ಭಾಷೆಯಾಗಿ ಆಗಲೀ ಕನ್ನಡ ಭಾಷೆಯನ್ನು ಕಡ್ಡಾಯ ಭಾಷೆಯನ್ನಾಗಿ ಹಂತಹಂತವಾಗಿ ಕಲಿಸತಕ್ಕದ್ದು.

(2) ಈಗ ಯಾವ ಶಾಲೆಗಳಲ್ಲಿ ಕನ್ನಡವನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯನ್ನಾಗಿ ಕಲಿಸಲಾಗುತ್ತಿಲ್ಲವೋ, ಆ ಶಾಲೆಗಳಲ್ಲಿ 2015–16ನೇ ಶೈಕ್ಷಣಿಕ ವರ್ಷದಿಂದ 1ನೇ ತರಗತಿಯಲ್ಲಿ ಕನ್ನಡವನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯನ್ನಾಗಿ ಆರಂಭಿಸತಕ್ಕದ್ದು ಹಾಗೂ 2016–17ನೇ ಶೈಕ್ಷಣಿಕ ವರ್ಷದಲ್ಲಿ 1ನೇ ಮತ್ತು 2ನೇ ತರಗತಿಗಳಲ್ಲಿ ಹಾಗೂ ಇದೇ ರೀತಿಯಾಗಿ 10ನೇ ತರಗತಿಯವರೆಗೆ ಹಂತಹಂತವಾಗಿ ವಿಸ್ತರಿಸತಕ್ಕದ್ದು.

(3) ಎಲ್ಲಾ ಶಾಲೆಗಳು ಕಡ್ಡಾಯವಾಗಿ ಕನ್ನಡವನ್ನು ಪ್ರಥಮ ಭಾಷೆ ಅಥವಾ ದ್ವಿತೀಯ ಭಾಷೆಯಾಗಿ ಕಲಿಸಲು ರಾಜ್ಯ ಸರ್ಕಾರದಿಂದ ನಿಯಮಿಸಲಾದ ಪಠ್ಯಪುಸ್ತಕಗಳನ್ನು ಅನುಸರಿಸತಕ್ಕದ್ದು.

(4) ಯಾವೊಬ್ಬ ವಿದ್ಯಾರ್ಥಿಯು ಆತನ ಮಾತೃಭಾಷೆಯನ್ನು (ಕನ್ನಡವನ್ನು ಹೊರತುಪಡಿಸಿ) ಪ್ರಥಮ ಅಥವಾ ದ್ವಿತೀಯ ಭಾಷೆಯನ್ನಾಗಿ ಆಯ್ಕೆ ಮಾಡಿಕೊಳ್ಳದಿದ್ದರೆ ತೃತೀಯ ಭಾಷೆಯಾಗಿ ತನ್ನ ಮಾತೃಭಾಷೆಯನ್ನು ವ್ಯಾಸಂಗ ಮಾಡಬಹುದು.

**4. ಸಕ್ಷಮ ಪ್ರಾಧಿಕಾರಿ.**– (1) ಸರ್ಕಾರವು, ಅಧಿಸೂಚನೆಯ ಮೂಲಕ ಮತ್ತು ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ನಿಯಮಗಳ ಉಪಬಂಧಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರ ದರ್ಜೆಗೆ ಕಡಿಮೆಯಲ್ಲದ ದರ್ಜೆಯ ಶಿಕ್ಷಣ ಇಲಾಖೆಯ ಯಾವೊಬ್ಬ ಅಧಿಕಾರಿಯನ್ನು ಸಕ್ಷಮ ಪ್ರಾಧಿಕಾರಿಯನ್ನಾಗಿ ನೇಮಿಸಬಹುದು ಹಾಗೂ ಬೇರೆಬೇರೆ ಪ್ರದೇಶಗಳಿಗೆ ಬೇರೆಬೇರೆ ಸಕ್ಷಮ ಪ್ರಾಧಿಕಾರಿಗಳನ್ನು ನೇಮಿಸಬಹುದು.

(2) ಸಕ್ಷಮ ಪ್ರಾಧಿಕಾರಿಯು, ನಿಯಮಿಸಬಹುದಾದ ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು.

**5. ಸಕ್ಷಮ ಪ್ರಾಧಿಕಾರಿಯು ಸಾರ್ವಜನಿಕ ನೌಕರನಾಗಿರುವುದು.–** 4ನೇ ಪ್ರಕರಣದ ಅಡಿಯಲ್ಲಿ ನೇಮಿಸಲಾದ ಸಕ್ಷಮ ಪ್ರಾಧಿಕಾರಿಯನ್ನು ಭಾರತೀಯ ದಂಡ ಸಂಹಿತೆಯ (1860ರ ಕೇಂದ್ರ ಅಧಿನಿಯಮ XLV) 21ನೇ ಪ್ರಕರಣದ ಅರ್ಥವ್ಯಾಪ್ತಿಯೊಳಗೆ ಸಾರ್ವಜನಿಕ ನೌಕರನೆಂದು ಭಾವಿಸತಕ್ಕದ್ದು.

**6. ನಿರ್ದೇಶನಗಳನ್ನು ನೀಡಲು ಸರ್ಕಾರದ ಅಧಿಕಾರ.–** (1) ಸರ್ಕಾರವು, ಸಾರ್ವಜನಿಕ ಹಿತ ದೃಷ್ಟಿಯಿಂದ, ಆದೇಶದ ಮೂಲಕ, ಸದರಿ ಆದೇಶದಲ್ಲಿ ನಿರ್ದಿಷ್ಟಪಡಿಸಿರುವ ಯಾವುದೇ ಪ್ರಕರಣದ ವಿಚಾರಣೆ ಮಾಡುವಂತೆ ಅಥವಾ ಈ ಅಧಿನಿಯಮದ ಅಡಿಯಲ್ಲಿ ಸೂಕ್ತ ವ್ಯವಹರಣೆಗಳನ್ನು ಕೈಗೊಳ್ಳುವಂತೆ ಸಕ್ಷಮ ಪ್ರಾಧಿಕಾರಿಗೆ ನಿರ್ದೇಶಿಸಬಹುದು ಮತ್ತು ಸಕ್ಷಮ ಪ್ರಾಧಿಕಾರಿಯು ತಾನು ಮಾಡಿದ ವಿಚಾರಣೆಯ ಅಥವಾ ಕೈಗೊಂಡ ವ್ಯವಹರಣೆಗಳ ಫಲಿತಾಂಶವನ್ನು ನಿಯಮಿಸಬಹುದಾದ ಅಂಥ ಅವಧಿಯೊಳಗೆ ಸರ್ಕಾರಕ್ಕೆ ವರದಿ ಮಾಡತಕ್ಕದ್ದು.

(2) (1)ನೇ ಉಪಪ್ರಕರಣದ ಅಡಿಯಲ್ಲಿ ಸಕ್ಷಮ ಪ್ರಾಧಿಕಾರಿಯಿಂದ ವರದಿಯನ್ನು ಸ್ವೀಕರಿಸಿದ ಮೇಲೆ ಸರ್ಕಾರವು ತಾನು ಸೂಕ್ತವೆಂದು ಭಾವಿಸುವ ಅಂಥ ನಿರ್ದೇಶನವನ್ನು ನೀಡತಕ್ಕದ್ದು ಹಾಗೂ ಅಂಥ ನಿರ್ದೇಶನವು ಅಂತಿಮ ಹಾಗೂ ಬದ್ಧವಾಗಿರತಕ್ಕದ್ದು.

**7. ಸದ್ಭಾವನೆಯಿಂದ ಕೈಗೊಂಡ ಕ್ರಮದ ಸಂರಕ್ಷಣೆ.–** ಈ ಅಧಿನಿಯಮದ ಅಥವಾ ಅದರ ಅಡಿಯಲ್ಲಿ ಮಾಡಲಾದ ಯಾವುದೇ ನಿಯಮ ಅಥವಾ ಆದೇಶದ ಅಡಿಯಲ್ಲಿ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಲು ಉದ್ದೇಶಿಸಿದ ಯಾವುದೇ ಕಾರ್ಯಕ್ಕಾಗಿ ಸಕ್ಷಮ ಪ್ರಾಧಿಕಾರಿ, ಸರ್ಕಾರ ಅಥವಾ ಅದರ ಅಧಿಕಾರಿಗಳ ವಿರುದ್ಧ ಯಾವುದೇ ದಾವೆ, ಪ್ರಾಸಿಕ್ಯೂಷನ್ ಅಥವಾ ಕಾನೂನು ವ್ಯವಹರಣೆಗಳನ್ನು ಹೂಡತಕ್ಕದ್ದಲ್ಲ.

**8. ನಿಯಮಗಳನ್ನು ರಚಿಸಲು ಅಧಿಕಾರ.–** (1) ಸರ್ಕಾರವು, ಅಧಿಸೂಚನೆಯ ಮೂಲಕ ಪೂರ್ವ ಪ್ರಕಟಣೆಯ ತರುವಾಯ ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ನಿಯಮಗಳನ್ನು ರಚಿಸಬಹುದು.

(2) ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ, ಆದಷ್ಟು ಬೇಗನೆ, ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ, ಒಂದು ಅಧಿವೇಶನ ಅಥವಾ ಎರಡು ಅಥವಾ ಹೆಚ್ಚು ನಿರಂತರ ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಅದು ಅಧಿವೇಶನದಲ್ಲಿದ್ದಾಗ ಮಂಡಿಸತಕ್ಕದ್ದು ಮತ್ತು ಅದನ್ನು ಹಾಗೆ ಮಂಡಿಸಿದ ಅಧಿವೇಶನ ಅಥವಾ ಅದರ ನಿಕಟ ತರುವಾಯದ ಅಧಿವೇಶನ ಮುಕ್ತಾಯವಾಗುವ ಮೊದಲು ಉಭಯ ಸದನಗಳು ನಿಯಮದಲ್ಲಿ ಯಾವುದೇ ಮಾರ್ಪಾಡು ಮಾಡಬೇಕೆಂದು ಒಪ್ಪಿದರೆ ಅಥವಾ ಯಾವುದೇ ನಿಯಮ ರಚಿಸಬಾರದೆಂದು ಒಪ್ಪಿದರೆ, ಆ ತರುವಾಯ ಸಂದರ್ಭಾನುಸಾರವಾಗಿ ನಿಯಮವು ಹಾಗೆ ಮಾರ್ಪಾಟಾದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಯಾವುದೇ ಪರಿಣಾಮ ಹೊಂದಿರತಕ್ಕದ್ದಲ್ಲ. ಆದಾಗ್ಯೂ ಅಂಥ ಯಾವುದೇ ಮಾರ್ಪಾಟು ಅಥವಾ ರದ್ಧತಿಯು ಆ ನಿಯಮದ ಅಡಿಯಲ್ಲಿ ಮೊದಲು ಮಾಡಿದ ಯಾವುದೇ ಕೃತ್ಯದ ಮಾನ್ಯತೆಗೆ ಬಾಧಕವಾಗತಕ್ಕದ್ದಲ್ಲ.

**9. ತೊಂದರೆಗಳನ್ನು ನಿವಾರಿಸಲು ಅಧಿಕಾರ.–** ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವಲ್ಲಿ ಯಾವುದೇ ತೊಂದರೆಯು ಉದ್ಭವಿಸಿದಲ್ಲಿ, ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಲಾದ ಆದೇಶದ ಮೂಲಕ ಸರ್ಕಾರವು ಸದರಿ ತೊಂದರೆಯನ್ನು ನಿವಾರಿಸಲು ತನಗೆ ಅವಶ್ಯಕ ಅಥವಾ ಯುಕ್ತವೆಂದು ಕಂಡುಬರುವ ಅಂಥ ಉಪಬಂಧಗಳನ್ನು ರಚಿಸಬಹುದು.

ಪರಂತು, ಈ ಅಧಿನಿಯಮವು ಪ್ರಾರಂಭವಾದ ದಿನಾಂಕದಿಂದ ಎರಡು ವರ್ಷಗಳ ಅವಧಿಯು ಮುಕ್ತಾಯಗೊಂಡ ತರುವಾಯ ಯಾವುದೇ ಅಂಥ ಆದೇಶವನ್ನು ಹೊರಡಿಸತಕ್ಕದ್ದಲ್ಲ.

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ರಾಜ್ಯದಲ್ಲಿ ಎಲ್ಲಾ ಶಾಲೆಗಳಲ್ಲಿ 1ರಿಂದ 10ನೇ ತರಗತಿಗಳವರೆಗೆ ವ್ಯಾಸಂಗ ಮಾಡುತ್ತಿರುವ ಎಲ್ಲಾ ವಿದ್ಯಾರ್ಥಿಗಳಿಗೆ 2015–16ನೇ ಶೈಕ್ಷಣಿಕ ವರ್ಷದಿಂದ ಹಂತಹಂತವಾಗಿ ಕನ್ನಡವನ್ನು ಒಂದು ಕಡ್ಡಾಯ ಭಾಷೆಯನ್ನಾಗಿ ಕಲಿಸುವುದನ್ನು ಖಚಿತಪಡಿಸಿಕೊಳ್ಳಲು ಕರ್ನಾಟಕ ಸರ್ಕಾರವು ಒಂದು ನೀತಿನಿರ್ಣಯವನ್ನು ತೆಗೆದುಕೊಂಡಿದೆ ಹಾಗೂ ಈ ನೀತಿನಿರ್ಣಯವನ್ನು ಕಾರ್ಯಗತಗೊಳಿಸುವುದಕ್ಕೆ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರ ದರ್ಜೆಗೆ ಕಡಿಮೆಯಲ್ಲದ ದರ್ಜೆಯ ಅಧಿಕಾರಿಯನ್ನು ಸಕ್ಷಮ ಪ್ರಾಧಿಕಾರಿಯನ್ನಾಗಿ ನೇಮಿಸುವುದು ಅವಶ್ಯಕವೆಂದು ಪರಿಗಣಿಸಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಪ್ರತ್ಯಾಯೋಜಿತ ಶಾಸನ ರಚನೆಗೆ ಸಂಬಂಧಿಸಿದ ಜ್ಞಾಪನ ಪತ್ರ**

| | |
|---|---|
| **ಖಂಡ 3 :** | (3)ನೇ ಉಪಖಂಡವು, ಕನ್ನಡ ಭಾಷೆಯನ್ನು ಕಲಿಸಲು ಪಠ್ಯಪುಸ್ತಕಗಳನ್ನು ನಿಯಮಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| **ಖಂಡ 4 :** | (2)ನೇ ಉಪಖಂಡವು ಸಕ್ಷಮ ಪ್ರಾಧಿಕಾರಿಯ ಅಧಿಕಾರಗಳು ಮತ್ತು ಕರ್ತವ್ಯಗಳ ಸಂಬಂಧದಲ್ಲಿ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| **ಖಂಡ 6 :** | (1)ನೇ ಉಪಖಂಡವು, ಸಕ್ಷಮ ಪ್ರಾಧಿಕಾರಿಯು ಮಾಡುವ ವಿಚಾರಣೆಯ ಫಲಿತಾಂಶಗಳು ಅಥವಾ ಆತನು ತೆಗೆದುಕೊಂಡ ವ್ಯವಹರಣೆಗಳನ್ನು ಸರ್ಕಾರಕ್ಕೆ ಯಾವ ಅವಧಿಯೊಳಗೆ ವರದಿ ಮಾಡಿಕೊಳ್ಳತಕ್ಕದ್ದು ಎಂಬುದರ ಸಂಬಂಧದಲ್ಲಿ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |

| | |
|---|---|
| **ಖಂಡ 8 :** | (1)ನೇ ಉಪಖಂಡವು, ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸುವುದಕ್ಕಾಗಿ ಪೂರ್ವ ಪ್ರಕಟಣೆಯ ತರುವಾಯ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |

ಪ್ರಸ್ತಾವಿತ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

**ಕಿಮ್ಮನೆ ರತ್ನಾಕರ**

ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

**ಪಿ. ಓಂಪ್ರಕಾಶ**

ಕಾರ್ಯದರ್ಶಿ

ಕರ್ನಾಟಕ ವಿಧಾನ ಸಭೆ

## KARNATAKA LEGISLATIVE ASSEMBLY

### FOURTEENTH LEGISLATIVE ASSEMBLY

### SIXTH SESSION

### (ADJOURNED MEETINGS)

## THE KANNADA LANGUAGE LEARNING BILL, 2015

### (L.A. Bill No. 10 of 2015)

A Bill to provide and ensure learning of Kannada as one of the language in all schools in the State of Karnataka.

Whereas, a policy decision has been taken by the Government of Karnataka to ensure that all students studying in standards I to X in all schools in the State shall learn Kannada as one of the language in a phased manner from the academic year 2015-16.

Be it enacted by the Karnataka State Legislature in the sixty-sixth year of the Republic of India as follows:-

**1. Short title and commencement.-** (1) This Act may be called the Kannada Language Learning Act, 2015.

(2) It shall come into force on such date as the Government may, by notification, appoint.

**2. Definitions.-** In this Act, unless the context otherwise requires,-

(a) "Academic year" means the year commencing on the first day of June;

(b) "Competent authority" means the competent authority appointed by the Government under section 4;

(c) "Government" means the State Government;

(d) "Prescribed" means prescribed by the rules;

(e) "School" means,-

(i) any Primary School, Middle School, High School or Higher Secondary School established and maintained by the State Government or Local Bodies; or

(ii) any Primary School, Middle School, High School or Higher Secondary School established and administered or maintained by any private educational agency including minority school established and administered under clause (1) of Article 30 of the Constitution of India, whether receiving aid out of the State fund or not; or

(iii) any Nursery and Primary School, Matriculation School, Anglo-Indian School or Oriental School including minority school established and administered under clause (1) of Article 30 of the Constitution of India, whether receiving aid out of the State fund or not; or

(iv) such other School as may be notified by the Government in this behalf.

**Explanation. -** For the purpose of this clause,-

(1) A School having any of classes from Nursery to X standard is considered a school for the purpose of this Act.

(2) Words and expressions used in this Act but not defined shall have the same meaning assigned to it in the Karnataka Education Act, 1983 (Karnataka Act 1 of 1995).

**3. Kannada as a Compulsory Language.-** (1) Kannada language shall be taught as a compulsory language in all classes, in all schools in the State, either as a first language or as a second language in the phased manner.

(2) In those Schools which are not teaching Kannada as a first and second language, as of now, shall introduce Kannada as first or second language in Standard-I from the academic year 2015-16 and in the standard I and II in the academic year 2016-17 and in the phased manner shall be extended upto X$^{th}$ standard in a like manner.

(3) Every School shall follow Text Books Prescribed by the State Government for teaching Kannada as First language or Second language compulsorily.

(4) A student who has not opted his mother tongue (other than Kannada) as First or Second Language may study his mother tongue as Third Language.

**4. Competent Authority.-** (1) The Government may, by notification, appoint any officer of the Education Department not below the rank of Deputy Director of Public Instructions to be the Competent Authority for the purposes of carrying out the provisions of this Act and the rules made there under and different competent authorities may be appointed for different areas.

(2) The Competent Authority shall exercise such powers and perform such functions as may be prescribed.

**5. Competent Authority to be public servant.-** The competent authority appointed under section 4 shall be deemed to be public servant within the meaning of section 21 of the Indian Penal Code (Central Act XLV of 1860).

**6. Power of the Government to give direction.-** (1) The Government may, in public interest, by order, direct the competent authority to make an enquiry or to take appropriate proceedings under this Act in any case specified in the Order and the competent authority shall report to the Government the result of the enquiry made or the proceedings taken by him within such period as may be prescribed.

(2) On receipt of the report from the competent authority under sub-section (1), the Government shall give such direction as it deems fit and such direction shall be final and binding.

**7. Protection of action taken in good faith.-** No suit, prosecution or other legal proceedings shall lie against the competent authority, Government or its officers for anything which is in good faith done or intended to be done under this Act or any rule or order made there under.

**8. Power to make rules.-** (1) The Government may, by notification, after previous publication make rules for carrying out the purposes of this Act.

(2) Every rule made under this Act shall be laid as soon as may be after it is made before each House of the State Legislature while it is in session for a total period of thirty days which may be comprised in one session or in two or more successive sessions, and if, before the expiry of the session immediately following the session or the successive sessions aforesaid, both Houses agree in making any modification in the rule or both Houses agree that the rule shall not be made, the rule shall thereafter have effect only in such modified form or be of no effect, as the case may be, so however, that any such modification or annulment shall be without prejudice to the validity of anything previously done under that rule.

**9. Power to remove difficulties.-** If any difficulty arises in giving effect to the provisions of this Act, the Government may, by Order published in the official Gazette, make such provisions, as appears to it to be necessary or expedient for removing the difficulty.

Provided that no such order shall be made after the expiry of a period of two years from the date of commencement of this Act.

**STATEMENT OF OBJECTS AND REASON**

A policy decision has been taken by the Government of Karnataka to ensure that, all students studying in standards I to X in all schools in the state to be taught Kannada language as one of the compulsory language in all classes in a phased manner from the academic year 2015-16 and it is considered necessary to appoint an officer not below the rank of Deputy Director of Public Instructions to be the Competent Authority to implement this policy decision.

Hence, the Bill.

**FINANCIAL MEMORANDUM**

There is no extra expenditure involved in the proposed legislative measure.

**MEMORANDUM REGARDING DELEGATED LEGISLATION**

| | |
|---|---|
| **Clause 3:** | Sub-clause (3) empower the State Government to prescribe Text Books for teaching of kannada language. |
| **Clause 4:** | Sub-clause (2) empowers the State Government to make rules regarding the powers and functions of the competent authority. |

| | |
|---|---|
| **Clause 6:** | Sub-clause (1) empowers the State Government to make rules regarding the period within which the competent authority shall report to the Government the results of the enquiry made or proceedings taken by him. |
| **Clause 8:** | Sub-clause (1) empowers the State Government to make rules for carrying out the purposes of this Act after previous publication. |

**KIMMANE RATHNAKAR**
Minister for Primary and Secondary Education

**P. OMPRAKASHA**
Secretary
Karnataka Legislative Assembly

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A<br>Part – IV-A | ಬೆಂಗಳೂರು, ಗುರುವಾರ, ಮಾರ್ಚ್ ೨೬, ೨೦೧೫ (ಚೈತ್ರ ೦೫, ಶಕ ವರ್ಷ ೧೯೩೭)<br>Bengaluru, Thursday, March 26, 2015 (Chaithra 05, Shaka Varsha 1937) | ನಂ. ೨೩೯<br>No. 239 |
|---|---|---|

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಡಿಪಿಎಆರ್ 155 ಹೆಚ್‌ಇಟಿ 2014, ಬೆಂಗಳೂರು, ದಿನಾಂಕ: 25.03.2015.**

ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978 (1990ರ ಕರ್ನಾಟಕ ಅಧಿನಿಯಮ ಸಂಖ್ಯೆ 14)ರ 3ನೇ ಪ್ರಕರಣದ (2)ನೇ ಉಪ–ಪ್ರಕರಣ(ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ, ಅಧಿಸೂಚನೆ ಸಂಖ್ಯೆ:ಡಿಪಿಎಆರ್ 155 ಹೆಚ್‌ಇಟಿ 2014, ದಿನಾಂಕ:19.02.2015ರಲ್ಲಿ ಕರ್ನಾಟಕ ಸಾಮಾನ್ಯ ಸೇವೆಗಳ(ಸರ್ಕಾರಿ ಅತಿಥಿ ವ್ಯವಸ್ಥೆ ನೇಮಕಾತಿ) ತಿದ್ದುಪಡಿ ನಿಯಮಗಳು, 2015ರ ಕರಡನ್ನು ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ IV-ಎ ರಲ್ಲಿ ಪ್ರಕಟಿಸಿ, ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯ ದಿನಾಂಕದಿಂದ ಹದಿನೈದು ದಿನಗಳೊಳಗಾಗಿ ಅದರಿಂದ ಬಾಧಿತರಾಗಬಹುದಾದ ಎಲ್ಲಾ ವ್ಯಕ್ತಿಗಳಿಂದ ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಆಹ್ವಾನಿಸಿ ಪ್ರಕಟಪಡಿಸಲಾಗಿದೆ.

ಮತ್ತು ಸದರಿ ರಾಜ್ಯ ಪತ್ರವು ದಿನಾಂಕ: 21.02.2015ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಲಾಗಿದೆ.

ಮತ್ತು ಸದರಿ ನಿಗದಿತ ಅವಧಿಯಲ್ಲಿ ಯಾವುದೇ ಸಲಹೆಗಳು ಮತ್ತು ಆಕ್ಷೇಪಣೆಗಳನ್ನು ಬಾಧಿತರಿಂದ ಸ್ವೀಕರಿಸಿರುವುದಿಲ್ಲದಿರುವುದರಿಂದ;

ಈಗ, ಕರ್ನಾಟಕ ಸರ್ಕಾರವು, ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ 1978(1990 ರ ಕರ್ನಾಟಕ ಅಧಿನಿಯಮ 14)ರ 3ನೇ ಪ್ರಕರಣದ (1)ನೇ ಉಪ ಪ್ರಕರಣವನ್ನು 8ನೇ ಪ್ರಕರಣದೊಡನೆ ಓದಿಕೊಂಡಂತೆ ಇದರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಈ ಮೂಲಕ ಈ ಕೆಳಗಿನಂತೆ ನಿಯಮಗಳನ್ನು ರಚಿಸುತ್ತದೆ, ಎಂದರೆ:–

### ನಿಯಮಗಳು

1. **ಹೆಸರು ಮತ್ತು ಪ್ರಾರಂಭ.**– (1) ಈ ನಿಯಮಗಳನ್ನು ಕರ್ನಾಟಕ ಸಾಮಾನ್ಯ ಸೇವೆಗಳು (ಸರ್ಕಾರಿ ಆತಿಥ್ಯ ಸಂಸ್ಥೆಯ ನೇಮಕಾತಿ) (ತಿದ್ದುಪಡಿ) ನಿಯಮಗಳು, 2015 ಎಂದು ಕರೆಯತಕ್ಕದ್ದು.

(2) ಇವು ಅಧಿಕೃತ ರಾಜ್ಯ ಪತ್ರದಲ್ಲಿ ಅಂತಿಮವಾಗಿ ಪ್ರಕಟಗೊಂಡ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

2. **ಅನುಸೂಚಿಯ ತಿದ್ದುಪಡಿ.**– ಕರ್ನಾಟಕ ಸಾಮಾನ್ಯ ಸೇವೆಗಳು (ಸರ್ಕಾರಿ ಆತಿಥ್ಯ ಸಂಸ್ಥೆಯ ನೇಮಕಾತಿ) ನಿಯಮಗಳು, 1986ರ ಅನುಸೂಚಿಯಲ್ಲಿ,–

(1) **"ಎ. ಕರ್ನಾಟಕ ಭವನವನ್ನು ಹೊರತುಪಡಿಸಿ ಅತಿಥಿ ಗೃಹ"** ಎಂಬ ಶೀರ್ಷಿಕೆಯಡಿಯಲ್ಲಿ,–

(i) ಕ್ರಮಸಂಖ್ಯೆ: 08 ರಲ್ಲಿ, (4)ನೇ ಅಂಕಣದಲ್ಲಿ, **"ಕರ್ನಾಟಕ ಭವನ ಹೊರತುಪಡಿಸಿ ಶೀಘ್ರಲಿಪಿಗಾರರು"** ಹುದ್ದೆಗಳ ಪ್ರವರ್ಗಕ್ಕೆ ಸಂಬಂಧಪಟ್ಟ ನಮೂದುಗಳಲ್ಲಿ, ಈ ಮುಂದಿನಂತೆ ಸೇರಿಸತಕ್ಕದ್ದು, ಎಂದರೆ:–

**"ಮುಂಬಡ್ತಿಗಾಗಿ,**–ಬೆರಳಚ್ಚುಗಾರರ ವೃಂದದಲ್ಲಿ ಐದು ವರ್ಷಗಳಿಗಿಂತ ಕಡಿಮೆಯಿಲ್ಲದಂತೆ ಸೇವೆಯನ್ನು ಸಲ್ಲಿಸಿರಬೇಕು.

"ಪರಂತು, ಐದು ವರ್ಷಗಳಿಗಿಂತ ಕಡಿಮೆಯಿಲ್ಲದಂತೆ ಸೇವೆಯನ್ನು ಸಲ್ಲಿಸಿರುವ ವ್ಯಕ್ತಿಗಳು ಲಭ್ಯವಿಲ್ಲದಿದ್ದರೆ, ಮೂರು ವರ್ಷಗಳಿಗಿಂತ ಕಡಿಮೆಯಿಲ್ಲದಂತೆ ಸೇವೆಯನ್ನು ಸಲ್ಲಿಸಿರುವ ವ್ಯಕ್ತಿಯನ್ನು ಮುಂಬಡ್ತಿಗಾಗಿ ಪರಿಗಣಿಸಬಹುದು."

(ii) ಕ್ರಮಸಂಖ್ಯೆ: 11 ರಲ್ಲಿ, **"ದ್ವಿತೀಯ ದರ್ಜೆ ಗುಮಾಸ್ತರು"** ಹುದ್ದೆಗಳ ಪ್ರವರ್ಗಕ್ಕೆ ಮತ್ತು ಅದಕ್ಕೆ ಸಂಬಂಧಿಸಿದ ನಮೂದುಗಳಿಗೆ, ಈ ಮುಂದಿನಂತೆ ಬದಲಿಯಾಗಿ ಸೇರಿಸತಕ್ಕದ್ದು, ಎಂದರೆ:–

| | | | |
|---|---|---|---|
| 11 | ದ್ವಿತೀಯ ದರ್ಜೆ ಸಹಾಯಕರು | ಕರ್ನಾಟಕ ಸಿವಿಲ್ ಸೇವೆಗಳು (ಲಿಪಿಕ ಹುದ್ದೆಗಳಿಗೆ ನೇಮಕಾತಿ) ನಿಯಮಗಳು, 1978ರ ಅನುಸಾರವಾಗಿ ನೇರ ನೇಮಕಾತಿಯ ಮೂಲಕ ಅಥವಾ ವರ್ಗಾವಣೆಯ ಮೂಲಕ ಅಥವಾ ಕರ್ನಾಟಕ ಸಿವಿಲ್ ಸೇವೆಗಳು (ಲಿಪಿಕ ಹುದ್ದೆಗಳಿಗೆ ನೇಮಕಾತಿ) ನಿಯಮಗಳು, 1978ರ ಅನುಸಾರವಾಗಿ ಮುಂಬಡ್ತಿಯ ಮೂಲಕ | |

(iii) ಕ್ರಮಸಂಖ್ಯೆ: 12, (4)ನೇ ಅಂಕಣದಲ್ಲಿ **'ಕರ್ನಾಟಕ ಭವನ ಹೊರತುಪಡಿಸಿ ಸ್ವಾಗತಕಾರ'** ಹುದ್ದೆಯ ಪ್ರವರ್ಗಕ್ಕೆ ಸಂಬಂಧಿಸಿದ ನಮೂದುಗಳಲ್ಲಿ, ಈ ಮುಂದಿನಂತೆ ಸೇರಿಸತಕ್ಕದ್ದು, ಎಂದರೆ:–

"ಪಿಯುಸಿ ಪರೀಕ್ಷೆಯಲ್ಲಿ ಕನ್ನಡವನ್ನು ಒಂದು ವಿಷಯವಾಗಿ ತೆಗೆದುಕೊಂಡು ಉತ್ತೀರ್ಣರಾಗಿರಬೇಕು ಅಥವಾ ಅದಕ್ಕೆ ತತ್ಸಮಾನ ವಿದ್ಯಾರ್ಹತೆಯನ್ನು ಹೊಂದಿರಬೇಕು".

(iv) ಕ್ರಮಸಂಖ್ಯೆ: 14, (4)ನೇ ಅಂಕಣದಲ್ಲಿ, **'ಕರ್ನಾಟಕ ಭವನ ಹೊರತು ಪಡಿಸಿ ದೂರವಾಣಿ ನಿರ್ವಹಣೆಗಾರರು'** ಹುದ್ದೆಯ ಪ್ರವರ್ಗಕ್ಕೆ ಸಂಬಂಧಿಸಿದ ನಮೂದುಗಳಲ್ಲಿ,–

(ಎ) **"ನೇರ ನೇಮಕಾತಿಗಾಗಿ"** ಎಂಬ ಉಪ–ಶೀರ್ಷಿಕೆಯಡಿಯಲ್ಲಿ (1)ನೇ ಬಾಬುವಿಗೆ ಈ ಮುಂದಿನಂತೆ ಬದಲಿಯಾಗಿ ಸೇರಿಸತಕ್ಕದ್ದು, ಎಂದರೆ:–

"(1) ಪಿಯುಸಿ ಪರೀಕ್ಷೆಯಲ್ಲಿ ಕನ್ನಡವನ್ನು ಒಂದು ವಿಷಯವಾಗಿ ತೆಗೆದುಕೊಂಡು ಉತ್ತೀರ್ಣರಾಗಿರಬೇಕು ಅಥವಾ ಅದಕ್ಕೆ ತತ್ಸಮಾನವಾದ ವಿದ್ಯಾರ್ಹತೆಯನ್ನು ಹೊಂದಿರಬೇಕು."

(ಬಿ) **"ನಿಯೋಜನೆಗಾಗಿ"** ಎಂಬ ಉಪ–ಶೀರ್ಷಿಕೆಯಡಿಯಲ್ಲಿ, (1)ನೇ ಬಾಬುವಿಗೆ ಈ ಮುಂದಿನಂತೆ ಬದಲಿಯಾಗಿ ಸೇರಿಸತಕ್ಕದ್ದು, ಎಂದರೆ:–

"(1) ಪಿಯುಸಿ ಪರೀಕ್ಷೆಯಲ್ಲಿ ಕನ್ನಡವನ್ನು ಒಂದು ವಿಷಯವಾಗಿ ತೆಗೆದುಕೊಂಡು ಉತ್ತೀರ್ಣರಾಗಿರಬೇಕು ಅಥವಾ ಅದಕ್ಕೆ ತತ್ಸಮಾನವಾದ ವಿದ್ಯಾರ್ಹತೆಯನ್ನು ಹೊಂದಿರಬೇಕು."

(v) ಕ್ರಮಸಂಖ್ಯೆ: 16 ರಲ್ಲಿ, (4)ನೇ ಅಂಕಣದಲ್ಲಿ, **"ಕರ್ನಾಟಕ ಭವನ ಹೊರತುಪಡಿಸಿ ಮುಖ್ಯಚಾಕರ (ಬಟ್ಲರ್)ದರ್ಜೆ–I"** ಹುದ್ದೆಗಳ ಪ್ರವರ್ಗಕ್ಕೆ ಸಂಬಂಧಿಸಿದ ನಮೂದುಗಳಲ್ಲಿ,

(ಎ) **'ಮುಂಬಡ್ತಿಗೆ'** ಎಂಬ ಉಪ–ಶೀರ್ಷಿಕೆಯಲ್ಲಿ ನಮೂದುಗಳ ತರುವಾಯ, ಈ ಮುಂದಿನವುಗಳನ್ನು ಕೊನೆಯಲ್ಲಿ ಸೇರಿಸತಕ್ಕದ್ದು, ಎಂದರೆ:–

"ಪರಂತು, ಐದು ವರ್ಷಗಳಿಗಿಂತ ಕಡಿಮೆಯಿಲ್ಲದಂತೆ ಸೇವೆಯನ್ನು ಸಲ್ಲಿಸಿರುವ ವ್ಯಕ್ತಿಯು ಲಭ್ಯವಿಲ್ಲದಿದ್ದರೆ, ಮೂರು ವರ್ಷಗಳಿಗಿಂತ ಕಡಿಮೆಯಿಲ್ಲದಂತೆ ಸೇವೆಯನ್ನು ಸಲ್ಲಿಸಿರುವ ವ್ಯಕ್ತಿಯನ್ನು ಮುಂಬಡ್ತಿಗಾಗಿ ಪರಿಗಣಿಸಬಹುದು."

(ಬಿ) **'ನೇರ ನೇಮಕಾತಿಗಾಗಿ'** ಎಂಬ ಉಪ–ಶೀರ್ಷಿಕೆಯಡಿಯಲ್ಲಿ, (1)ನೇ ಬಾಬುವಿಗೆ ಈ ಮುಂದಿನಂತೆ ಬದಲಿಯಾಗಿ ಸೇರಿಸತಕ್ಕದ್ದು, ಎಂದರೆ:–

"(1) ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಕನ್ನಡವನ್ನು ಒಂದು ವಿಷಯವಾಗಿ ತೆಗೆದುಕೊಂಡು ಉತ್ತೀರ್ಣರಾಗಿರಬೇಕು ಅಥವಾ ಅದಕ್ಕೆ ತತ್ಸಮಾನ ವಿದ್ಯಾರ್ಹತೆ ಹೊಂದಿರಬೇಕು"

(vi) ಕ್ರಮಸಂಖ್ಯೆ: 17 ರಲ್ಲಿ, **"ಕರ್ನಾಟಕ ಭವನ ಹೊರತುಪಡಿಸಿ ಅಡಿಗೆ ಕೆಲಸಗಾರ ದರ್ಜೆ–I"** ಹುದ್ದೆಗಳ ಪ್ರವರ್ಗಕ್ಕೆ ಸಂಬಂಧಿಸಿದ ನಮೂದುಗಳಲ್ಲಿ,–

(ಎ) (3)ನೇ ಅಂಕಣದಲ್ಲಿ, **"ನೇರ ನೇಮಕಾತಿ ಮೂಲಕ, ಮುಂಬಡ್ತಿಗೆ ಸೂಕ್ತ ವ್ಯಕ್ತಿಯು ಲಭ್ಯವಿಲ್ಲದಿದ್ದರೆ"** ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು;

(ಬಿ) (4)ನೇ ಅಂಕಣದಲ್ಲಿ ನಮೂದುಗಳ ತರುವಾಯ, ಈ ಮುಂದಿನವುಗಳನ್ನು ಕೊನೆಯಲ್ಲಿ ಸೇರಿಸತಕ್ಕದ್ದು, ಎಂದರೆ:–

"ಪರಂತು, ಐದು ವರ್ಷಗಳಿಗಿಂತ ಕಡಿಮೆಯಿಲ್ಲದಂತೆ ಸೇವೆಯನ್ನು ಸಲ್ಲಿಸಿರುವ ವ್ಯಕ್ತಿಯು ಲಭ್ಯವಿಲ್ಲದಿದ್ದರೆ, ಮೂರು ವರ್ಷಗಳಿಗಿಂತ ಕಡಿಮೆಯಿಲ್ಲದಂತೆ ಸೇವೆಯನ್ನು ಸಲ್ಲಿಸಿರುವ ವ್ಯಕ್ತಿಯನ್ನು ಮುಂಬಡ್ತಿಗಾಗಿ ಪರಿಗಣಿಸಬಹುದು."

(vii) ಕ್ರಮಸಂಖ್ಯೆ: 18 ರಲ್ಲಿ, (4)ನೇ ಅಂಕಣದಲ್ಲಿ, **"ಕರ್ನಾಟಕ ಭವನ ಹೊರತುಪಡಿಸಿ ಮುಖ್ಯಚಾಕರ(ಬಟ್ಲರ್) ಗ್ರೇಡ್–II"** ಹುದ್ದೆಗಳ ಪ್ರವರ್ಗಕ್ಕೆ ಸಂಬಂಧಿಸಿದ ನಮೂದುಗಳಲ್ಲಿ,–

(ಎ) **'ಮುಂಬಡ್ತಿಗೆ'** ಎಂಬ ಉಪ–ಶೀರ್ಷಿಕೆಯಡಿಯಲ್ಲಿ, (1)ನೇ ಬಾಬುವಿನ ನಂತರ ಈ ಮುಂದಿನವುಗಳನ್ನು ಕೊನೆಯಲ್ಲಿ ಸೇರಿಸತಕ್ಕದ್ದು, ಎಂದರೆ:–

"ಪರಂತು, ಐದು ವರ್ಷಗಳಿಗಿಂತ ಕಡಿಮೆಯಿಲ್ಲದಂತೆ ಸೇವೆಯನ್ನು ಸಲ್ಲಿಸಿರುವ ವ್ಯಕ್ತಿಯು ಲಭ್ಯವಿಲ್ಲದಿದ್ದರೆ, ಮೂರು ವರ್ಷಗಳಿಗಿಂತ ಕಡಿಮೆಯಿಲ್ಲದಂತೆ ಸೇವೆಯನ್ನು ಸಲ್ಲಿಸಿರುವ ವ್ಯಕ್ತಿಯನ್ನು ಮುಂಬಡ್ತಿಗಾಗಿ ಪರಿಗಣಿಸಬಹುದು."

(ಬಿ) **'ನೇರ ನೇಮಕಾತಿಗೆ'** ಎಂಬ ಉಪ–ಶೀರ್ಷಿಕೆಯಡಿಯಲ್ಲಿ, (1)ನೇ ಬಾಬುವಿಗೆ, ಮತ್ತು ಅದಕ್ಕೆ ಸಂಬಂಧಪಟ್ಟ ನಮೂದುಗಳನ್ನು ಈ ಮುಂದಿನಂತೆ ಬದಲಿಯಾಗಿ ಸೇರಿಸತಕ್ಕದ್ದು, ಎಂದರೆ:–

"(1) ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಕನ್ನಡವನ್ನು ಒಂದು ವಿಷಯವಾಗಿ ತೆಗೆದುಕೊಂಡು ಉತ್ತೀರ್ಣರಾಗಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ ಹೊಂದಿರಬೇಕು"

(viii) ಕ್ರಮಸಂಖ್ಯೆ: 19 ರಲ್ಲಿ, (4)ನೇ ಅಂಕಣದಲ್ಲಿ, **"ಕರ್ನಾಟಕ ಭವನ ಹೊರತುಪಡಿಸಿ ಅಡುಗೆ ಕೆಲಸಗಾರರು ಗ್ರೇಡ್–II"** ಹುದ್ದೆಗಳ ಪ್ರವರ್ಗಕ್ಕೆ ಸಂಬಂಧಿಸಿದ ನಮೂದುಗಳಲ್ಲಿ,

(ಎ) **'ಮುಂಬಡ್ತಿಗೆ'** ಉಪ–ಶೀರ್ಷಿಕೆಯಡಿಯಲ್ಲಿ, (1)ನೇ ಬಾಬುವಿನ ನಂತರ, ಈ ಮುಂದಿನದನ್ನು ಕೊನೆಯಲ್ಲಿ ಸೇರಿಸತಕ್ಕದ್ದು, ಎಂದರೆ:–

"ಪರಂತು, ಐದು ವರ್ಷಗಳಿಗಿಂತ ಕಡಿಮೆಯಿಲ್ಲದಂತೆ ಸೇವೆಯನ್ನು ಸಲ್ಲಿಸಿರುವ ವ್ಯಕ್ತಿಯು ಲಭ್ಯವಿಲ್ಲದಿದ್ದರೆ, ಮೂರು ವರ್ಷಗಳಿಗಿಂತ ಕಡಿಮೆಯಿಲ್ಲದಂತೆ ಸೇವೆಯನ್ನು ಸಲ್ಲಿಸಿರುವ ವ್ಯಕ್ತಿಯನ್ನು ಮುಂಬಡ್ತಿಗಾಗಿ ಪರಿಗಣಿಸಬಹುದು."

(ಬಿ) **'ನೇರ ನೇಮಕಾತಿಗೆ'** ಎಂಬ ಉಪ–ಶೀರ್ಷಿಕೆಯಡಿಯಲ್ಲಿ, (1)ನೇ ಬಾಬುವಿಗೆ, ಮತ್ತು ಅದಕ್ಕೆ ಸಂಬಂಧಪಟ್ಟ ನಮೂದುಗಳನ್ನು ಈ ಮುಂದಿನಂತೆ ಬದಲಿಯಾಗಿ ಸೇರಿಸತಕ್ಕದ್ದು, ಎಂದರೆ:–

"(1) ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಕನ್ನಡವನ್ನು ಒಂದು ವಿಷಯವಾಗಿ ತೆಗೆದುಕೊಂಡು ಉತ್ತೀರ್ಣರಾಗಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ ಹೊಂದಿರಬೇಕು"

(ix) ಕ್ರಮಸಂಖ್ಯೆ: 20 ರಲ್ಲಿ, (4)ನೇ ಅಂಕಣದಲ್ಲಿ, **"ಕರ್ನಾಟಕ ಭವನ ಹೊರತುಪಡಿಸಿ ಚಾಲಕರ"** ಹುದ್ದೆಗಳ ಪ್ರವರ್ಗಕ್ಕೆ ಸಂಬಂಧಪಟ್ಟ ನಮೂದುಗಳಲ್ಲಿ, **'ನೇರ ನೇಮಕಾತಿಗೆ'** ಎಂಬ ಉಪ–ಶೀರ್ಷಿಕೆಯಡಿಯಲ್ಲಿ, (1)ನೇ ಬಾಬುವಿಗೆ, ಮತ್ತು ಅದಕ್ಕೆ ಸಂಬಂಧಪಟ್ಟ ನಮೂದುಗಳನ್ನು, ಈ ಮುಂದಿನಂತೆ ಬದಲಿಯಾಗಿ ಸೇರಿಸತಕ್ಕದ್ದು, ಎಂದರೆ:–

"(1) ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಕನ್ನಡವನ್ನು ಒಂದು ವಿಷಯವಾಗಿ ತೆಗೆದುಕೊಂಡು ಉತ್ತೀರ್ಣರಾಗಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ ಹೊಂದಿರಬೇಕು"

(x) ಕ್ರಮಸಂಖ್ಯೆ: 21 ರಲ್ಲಿ, (4)ನೇ ಅಂಕಣದಲ್ಲಿ, **"ಕರ್ನಾಟಕ ಭವನ ಹೊರತುಪಡಿಸಿ ಸ್ಕೂಟರ್ ಸಂದೇಶ ವಾಹಕ"** ಹುದ್ದೆಗಳ ಪ್ರವರ್ಗಕ್ಕೆ ಸಂಬಂಧಿಸಿದ ನಮೂದುಗಳಲ್ಲಿ,–

(ಎ) **'ಮುಂಬಡ್ತಿಗೆ'** ಎಂಬ ಉಪ–ಶೀರ್ಷಿಕೆಯಡಿಯಲ್ಲಿ, (2)ನೇ ಬಾಬುವಿನ ನಂತರ, ಈ ಮುಂದಿನದನ್ನು ಕೊನೆಯಲ್ಲಿ ಸೇರಿಸತಕ್ಕದ್ದು, ಎಂದರೆ:–

"ಪರಂತು, ಐದು ವರ್ಷಗಳಿಗಿಂತ ಕಡಿಮೆಯಿಲ್ಲದಂತೆ ಸೇವೆಯನ್ನು ಸಲ್ಲಿಸಿರುವ ವ್ಯಕ್ತಿಯು ಲಭ್ಯವಿಲ್ಲದಿದ್ದರೆ, ಮೂರು ವರ್ಷಗಳಿಗಿಂತ ಕಡಿಮೆಯಿಲ್ಲದಂತೆ ಸೇವೆಯನ್ನು ಸಲ್ಲಿಸಿರುವ ವ್ಯಕ್ತಿಯನ್ನು ಮುಂಬಡ್ತಿಗಾಗಿ ಪರಿಗಣಿಸಬಹುದು."

(ಬಿ) **'ನೇರ ನೇಮಕಾತಿಗೆ'** ಎಂಬ ಉಪ–ಶೀರ್ಷಿಕೆಯಡಿಯಲ್ಲಿ, (1)ನೇ ಬಾಬು, ಮತ್ತು ಅದಕ್ಕೆ ಸಂಬಂಧಪಟ್ಟ ನಮೂದುಗಳನ್ನು ಈ ಮುಂದಿನಂತೆ ಬದಲಿಯಾಗಿ ಸೇರಿಸತಕ್ಕದ್ದು, ಎಂದರೆ:–

"(1) ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಕನ್ನಡವನ್ನು ಒಂದು ವಿಷಯವಾಗಿ ತೆಗೆದುಕೊಂಡು ಉತ್ತೀರ್ಣರಾಗಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ ಹೊಂದಿರಬೇಕು"

(xi) ಕ್ರಮಸಂಖ್ಯೆ: 23 ರಲ್ಲಿ, (4)ನೇ ಅಂಕಣದಲ್ಲಿ, **"ಕರ್ನಾಟಕ ಭವನ ಹೊರತುಪಡಿಸಿ ಪರಿಚಾರಕರು(ವೇಟರ್ಸ್), ಬೇರರ್‌ಗಳು ರೂಮ್ ಬಾಯ್ಸ್, ಕೇರ್ ಟೇಕರ್ಸ್"** ಹುದ್ದೆಗಳ ಪ್ರವರ್ಗಕ್ಕೆ ಸಂಬಂಧಿಸಿದ ನಮೂದುಗಳಲ್ಲಿ, (1)ನೇ ಬಾಬುವಿಗೆ ಮತ್ತು ಅದಕ್ಕೆ ಸಂಬಂಧಪಟ್ಟ ನಮೂದುಗಳನ್ನು ಈ ಮುಂದಿನಂತೆ ಬದಲಿಯಾಗಿ ಸೇರಿಸತಕ್ಕದ್ದು, ಎಂದರೆ:–

"(1) ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಕನ್ನಡವನ್ನು ಒಂದು ವಿಷಯವಾಗಿ ತೆಗೆದುಕೊಂಡು ಉತ್ತೀರ್ಣರಾಗಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ ಹೊಂದಿರಬೇಕು"

(xii) ಕ್ರಮಸಂಖ್ಯೆ: 24 ರಲ್ಲಿ, (4)ನೇ ಅಂಕಣದಲ್ಲಿ, **"ಕರ್ನಾಟಕ ಭವನ ಹೊರತುಪಡಿಸಿ ದಲಾಯತ್, ಕಾವಲುಗಾರ(ವಾಚ್‌ಮನ್), ಜವಾನ(ಪೀವನ್), ಸ್ವಚ್ಛಗೊಳಿಸುವವರು(ಕ್ಲೀನರ್ಸ್), ಬೀಗದ ಸಹಾಯಕರು(ಟರ್ನ್‌ಕೀಯರು)"** ಹುದ್ದೆಗಳ ಪ್ರವರ್ಗಕ್ಕೆ ಸಂಬಂಧಿಸಿದ ನಮೂದುಗಳಲ್ಲಿ, (1)ನೇ ಬಾಬುವಿಗೆ ಈ ಮುಂದಿನಂತೆ ಬದಲಿಯಾಗಿ ಸೇರಿಸತಕ್ಕದ್ದು, ಎಂದರೆ:–

"(1) ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಕನ್ನಡವನ್ನು ಒಂದು ವಿಷಯವಾಗಿ ತೆಗೆದುಕೊಂಡು ಉತ್ತೀರ್ಣರಾಗಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ ಹೊಂದಿರಬೇಕು"

(xiii) ಕ್ರಮಸಂಖ್ಯೆ: 25 ರಲ್ಲಿ, (4)ನೇ ಅಂಕಣದಲ್ಲಿ, **"ಕರ್ನಾಟಕ ಭವನ ಹೊರತುಪಡಿಸಿ ಉದ್ಯಾನ ಪಾಲಕ, ಸ್ವೀಪರ್ಸ್"** ಹುದ್ದೆಗಳ ಪ್ರವರ್ಗಕ್ಕೆ ಸಂಬಂಧಿಸಿದ ನಮೂದುಗಳಲ್ಲಿ (1)ನೇ ಬಾಬುವಿಗೆ ಮತ್ತು ಅದಕ್ಕೆ ಸಂಬಂಧಪಟ್ಟ ನಮೂದುಗಳನ್ನು ಈ ಮುಂದಿನಂತೆ ಬದಲಿಯಾಗಿ ಸೇರಿಸತಕ್ಕದ್ದು, ಎಂದರೆ:–

"(1) ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಕನ್ನಡವನ್ನು ಒಂದು ವಿಷಯವಾಗಿ ತೆಗೆದುಕೊಂಡು ಉತ್ತೀರ್ಣರಾಗಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ ಹೊಂದಿರಬೇಕು"

(xiv) ಕ್ರಮಸಂಖ್ಯೆ: 26 ರಲ್ಲಿ, (4)ನೇ ಅಂಕಣದಲ್ಲಿ, **"ಕರ್ನಾಟಕ ಭವನ ಹೊರತುಪಡಿಸಿ ಅಡುಗೆ ಸಹಾಯಕ, ಅಡುಗೆ ಮಾಡುವವನು/ಸಹಾಯಕ"** ಹುದ್ದೆಗಳ ಪ್ರವರ್ಗಕ್ಕೆ ಸಂಬಂಧಪಟ್ಟ ನಮೂದುಗಳಲ್ಲಿ (1)ನೇ ಬಾಬುವಿಗೆ ಮತ್ತು ಅದಕ್ಕೆ ಸಂಬಂಧಪಟ್ಟ ನಮೂದುಗಳನ್ನು ಈ ಮುಂದಿನಂತೆ ಬದಲಿಯಾಗಿ ಸೇರಿಸತಕ್ಕದ್ದು, ಎಂದರೆ:–

"(1) ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಕನ್ನಡವನ್ನು ಒಂದು ವಿಷಯವಾಗಿ ತೆಗೆದುಕೊಂಡು ಉತ್ತೀರ್ಣರಾಗಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ ಹೊಂದಿರಬೇಕು"

(2) **"ಬಿ. ಕರ್ನಾಟಕ ಭವನ"** ಎಂಬ ಶೀರ್ಷಿಕೆಯಡಿಯಲ್ಲಿ,–

(i) ಕ್ರಮಸಂಖ್ಯೆ: 28ಎ ಯಲ್ಲಿ, **"ಕಿರಿಯ ಇಂಜಿನಿಯರ್ (ಎಲೆಕ್ಟ್ರಿಕಲ್)"** ಹುದ್ದೆಗಳ ಪ್ರವರ್ಗಕ್ಕೆ ಸಂಬಂಧಿಸಿದ ನಮೂದುಗಳ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

| | | | |
|---|---|---|---|
| 28ಬಿ | ಹಿರಿಯ ವ್ಯವಸ್ಥಾಪಕರು, ಕರ್ನಾಟಕ ಭವನ. | ಕರ್ನಾಟಕ ಭವನದ ವ್ಯವಸ್ಥಾಪಕರ ವೃಂದದಿಂದ ಮುಂಬಡ್ತಿ ಮೂಲಕ | ಕರ್ನಾಟಕ ಭವನ ವ್ಯವಸ್ಥಾಪಕರ ವೃಂದದಲ್ಲಿ ಐದು ವರ್ಷಗಳಿಗಿಂತ ಕಡಿಮೆಯಿಲ್ಲದಂತೆ ಸೇವೆಯನ್ನು ಸಲ್ಲಿಸಿರಬೇಕು. |

(ii) ಕ್ರಮಸಂಖ್ಯೆ: 29ರಲ್ಲಿ, **'ವ್ಯವಸ್ಥಾಪಕರು, ಕರ್ನಾಟಕ ಭವನ'** ಹುದ್ದೆಗಳಪ್ರವರ್ಗಕ್ಕೆ ಸಂಬಂಧಿಸಿದ ನಮೂದುಗಳಲ್ಲಿ 4ನೇ ಅಂಕಣದ ನಮೂದುಗಳ ನಂತರ, ಈ ಮುಂದಿನಂತೆ ಕೊನೆಯಲ್ಲಿ ಸೇರಿಸತಕ್ಕದ್ದು, ಎಂದರೆ:–

"ಪರಂತು, ಐದು ವರ್ಷಗಳಿಗಿಂತ ಕಡಿಮೆಯಿಲ್ಲದಂತೆ ಸೇವೆ ಸಲ್ಲಿಸಿರುವಂಥ ವ್ಯಕ್ತಿಗಳು ಲಭ್ಯವಿಲ್ಲದಿದ್ದರೆ, ಮೂರು ವರ್ಷಗಳಿಗಿಂತ ಕಡಿಮೆಯಿಲ್ಲದಂತೆ ಸೇವೆ ಸಲ್ಲಿಸಿರುವ ವ್ಯಕ್ತಿಗಳನ್ನು ಮುಂಬಡ್ತಿಗೆ ಪರಿಗಣಿಸಬಹುದು".

(iii) ಕ್ರಮಸಂಖ್ಯೆ: 30ರಲ್ಲಿ, 4ನೇ ಅಂಕಣದಲ್ಲಿ, **'ಸಹಾಯಕ ವ್ಯವಸ್ಥಾಪಕರು'** ಹುದ್ದೆಗಳ ಪ್ರವರ್ಗಕ್ಕೆ ಸಂಬಂಧಿಸಿದ ನಮೂದುಗಳಲ್ಲಿ **'ಮುಂಬಡ್ತಿಗಾಗಿ'** ಎಂಬ ಉಪ–ಶೀರ್ಷಿಕೆಯ ಮತ್ತು ಅದರಡಿಯಲ್ಲಿ ಸಂಬಂಧಪಟ್ಟ ನಮೂದುಗಳ ನಂತರ ಈ ಮುಂದಿನಂತೆ ಕೊನೆಯಲ್ಲಿ ಸೇರಿಸತಕ್ಕದ್ದು, ಎಂದರೆ:–

"ಪರಂತು, ಐದು ವರ್ಷಗಳಿಗಿಂತ ಕಡಿಮೆಯಿಲ್ಲದಂತೆ ಸೇವೆ ಸಲ್ಲಿಸಿರುವ ವ್ಯಕ್ತಿಗಳು ಲಭ್ಯವಿಲ್ಲದಿದ್ದರೆ, ಮೂರು ವರ್ಷಗಳಿಗಿಂತ ಕಡಿಮೆಯಿಲ್ಲದಂತೆ ಸೇವೆ ಸಲ್ಲಿಸಿರುವ ವ್ಯಕ್ತಿಗಳನ್ನು ಮುಂಬಡ್ತಿಗೆ ಪರಿಗಣಿಸಬಹುದು".

(iv) ಕ್ರಮಸಂಖ್ಯೆ: 32ರಲ್ಲಿ, 4ನೇ ಅಂಕಣದಲ್ಲಿ, **'ಸ್ವಾಗತಕಾರ/ದೂರವಾಣಿ ನಿರ್ವಹಣೆಗಾರ'** ಹುದ್ದೆಗಳ ಪ್ರವರ್ಗಕ್ಕೆ ಸಂಬಂಧಿಸಿದ ನಮೂದುಗಳಲ್ಲಿ,–

(ಎ) **'ನೇರ ನೇಮಕಾತಿಗಾಗಿ'** ಎಂಬ ಉಪ–ಶೀರ್ಷಿಕೆಯಲ್ಲಿ, (1)ನೇ ಬಾಬುವಿಗೆ ಮತ್ತು ಅದಕ್ಕೆ ಸಂಬಂಧಿಸಿದ ನಮೂದುಗಳಿಗೆ, ಈ ಮುಂದಿನಂತೆ ಬದಲಿಯಾಗಿ ಸೇರಿಸತಕ್ಕದ್ದು, ಎಂದರೆ:–

"(1) ಪಿ.ಯು.ಸಿ. ಪರೀಕ್ಷೆಯಲ್ಲಿ ಕನ್ನಡವನ್ನು ಒಂದು ವಿಷಯವಾಗಿ ತೆಗೆದುಕೊಂಡು ಉತ್ತೀರ್ಣರಾಗಿರಬೇಕು ಅಥವಾ ತತ್ಸಮಾನವಾದ ವಿದ್ಯಾರ್ಹತೆಯನ್ನು ಹೊಂದಿರಬೇಕು."

(ಬಿ) **'ಮುಂಬಡ್ತಿಗಾಗಿ'** ಎಂಬ ಉಪ–ಶೀರ್ಷಿಕೆಯಲ್ಲಿ (1)ನೇ ಬಾಬುವಿನ ನಂತರ ಈ ಮುಂದಿನದನ್ನು ಕೊನೆಯಲ್ಲಿ ಸೇರಿಸತಕ್ಕದ್ದು, ಎಂದರೆ:–

"ಪರಂತು, ಐದು ವರ್ಷಗಳಿಗಿಂತ ಕಡಿಮೆಯಿಲ್ಲದಂತೆ ಸೇವೆ ಸಲ್ಲಿಸಿರುವ ವ್ಯಕ್ತಿಗಳು ಲಭ್ಯವಿಲ್ಲದಿದ್ದರೆ, ಮೂರು ವರ್ಷಗಳಿಗಿಂತ ಕಡಿಮೆಯಿಲ್ಲದಂತೆ ಸೇವೆ ಸಲ್ಲಿಸಿರುವ ವ್ಯಕ್ತಿಗಳನ್ನು ಮುಂಬಡ್ತಿಗೆ ಪರಿಗಣಿಸಬಹುದು".

(v) ಕ್ರಮಸಂಖ್ಯೆ: 35ರಲ್ಲಿ, (4)ನೇ ಅಂಕಣದಲ್ಲಿ, **'ಅಡಿಗೆ ಕೆಲಸಗಾರ ದರ್ಜೆ–I'** ಹುದ್ದೆಗಳ ಪ್ರವರ್ಗಕ್ಕೆ ಸಂಬಂಧಿಸಿದ ನಮೂದುಗಳಲ್ಲಿ (1)ರ ಬಾಬುವಿನ ನಂತರ ಈ ಮುಂದಿನಂತೆ ಸೇರಿಸತಕ್ಕದ್ದು, ಎಂದರೆ:–

"ಪರಂತು, ಐದು ವರ್ಷಗಳಿಗಿಂತ ಕಡಿಮೆಯಿಲ್ಲದಂತೆ ಸೇವೆ ಸಲ್ಲಿಸಿರುವ ವ್ಯಕ್ತಿಗಳು ಲಭ್ಯವಿಲ್ಲದಿದ್ದರೆ, ಮೂರು ವರ್ಷಗಳಿಗಿಂತ ಕಡಿಮೆಯಿಲ್ಲದಂತೆ ಸೇವೆ ಸಲ್ಲಿಸಿರುವ ವ್ಯಕ್ತಿಗಳನ್ನು ಮುಂಬಡ್ತಿಗೆ ಪರಿಗಣಿಸಬಹುದು".

(vi) ಕ್ರಮಸಂಖ್ಯೆ: 36(ಎ)ನಲ್ಲಿ, (4)ನೇ ಅಂಕಣದಲ್ಲಿ, ನಮೂದುಗಳ ನಂತರ, **'ಹಿರಿಯ ವಿದ್ಯುತ್ ಕೆಲಸಗಾರ'** ಹುದ್ದೆಗಳ ಪ್ರವರ್ಗಕ್ಕೆ ಸಂಬಂಧಿಸಿದ ನಮೂದುಗಳಲ್ಲಿ ಈ ಮುಂದಿನಂತೆ ಕೊನೆಯಲ್ಲಿ ಸೇರಿಸತಕ್ಕದ್ದು, ಎಂದರೆ:–

"ಪರಂತು, ಐದು ವರ್ಷಗಳಿಗಿಂತ ಕಡಿಮೆಯಿಲ್ಲದಂತೆ ಸೇವೆ ಸಲ್ಲಿಸಿರುವ ವ್ಯಕ್ತಿಗಳು ಲಭ್ಯವಿಲ್ಲದಿದ್ದರೆ, ಮೂರು ವರ್ಷಗಳಿಗಿಂತ ಕಡಿಮೆಯಿಲ್ಲದಂತೆ ಸೇವೆ ಸಲ್ಲಿಸಿರುವ ವ್ಯಕ್ತಿಗಳನ್ನು ಮುಂಬಡ್ತಿಗೆ ಪರಿಗಣಿಸಬಹುದು".

(vii) ಕ್ರಮಸಂಖ್ಯೆ: 36(ಬಿ)ನಲ್ಲಿ, (4)ನೇ ಅಂಕಣದಲ್ಲಿ, ನಮೂದುಗಳ ನಂತರ, **'ಹಿರಿಯ ಕೊಳಾಯಿ ಕೆಲಸಗಾರ'** ಹುದ್ದೆಗಳ ಪ್ರವರ್ಗಕ್ಕೆ ಸಂಬಂಧಿಸಿದ ನಮೂದುಗಳಲ್ಲಿ, ಈ ಮುಂದಿನಂತೆ ಕೊನೆಯಲ್ಲಿ ಸೇರಿಸತಕ್ಕದ್ದು, ಎಂದರೆ:–

"ಪರಂತು, ಐದು ವರ್ಷಗಳಿಗಿಂತ ಕಡಿಮೆಯಿಲ್ಲದಂತೆ ಸೇವೆ ಸಲ್ಲಿಸಿರುವ ವ್ಯಕ್ತಿಗಳು ಲಭ್ಯವಿಲ್ಲದಿದ್ದರೆ, ಮೂರು ವರ್ಷಗಳಿಗಿಂತ ಕಡಿಮೆಯಿಲ್ಲದಂತೆ ಸೇವೆ ಸಲ್ಲಿಸಿರುವ ವ್ಯಕ್ತಿಗಳನ್ನು ಮುಂಬಡ್ತಿಗೆ ಪರಿಗಣಿಸಬಹುದು".

(viii) ಕ್ರಮಸಂಖ್ಯೆ: 37, (4)ನೇ ಅಂಕಣದಲ್ಲಿ, **'ಪರಿಚಾರಕ (ಅಟೆಂಡರ್)'** ಹುದ್ದೆಗಳ ಪ್ರವರ್ಗಕ್ಕೆ ಸಂಬಂಧಿಸಿದ ನಮೂದುಗಳಲ್ಲಿ ಈ ಮುಂದಿನಂತೆ ಸೇರಿಸತಕ್ಕದ್ದು, ಎಂದರೆ:–

"ಪರಂತು, ಹತ್ತು ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿದ ವ್ಯಕ್ತಿಗಳು ಲಭ್ಯವಿಲ್ಲದಿದ್ದರೆ, ಎಂಟು ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿದ ವ್ಯಕ್ತಿಗಳನ್ನು ಮುಂಬಡ್ತಿಗೆ ಪರಿಗಣಿಸಬಹುದು".

(ix) ಕ್ರಮಸಂಖ್ಯೆ: 38ರಲ್ಲಿ, (4)ನೇ ಅಂಕಣದಲ್ಲಿ, **'ಕರ್ನಾಟಕ ಭವನದಲ್ಲಿ ಚಾಲಕ'** ಹುದ್ದೆಗಳ ಪ್ರವರ್ಗಕ್ಕೆ ಸಂಬಂಧಿಸಿದ ನಮೂದುಗಳಲ್ಲಿ ಮುಂಬಡ್ತಿಗಾಗಿ ಎಂಬ ಉಪ ಶೀರ್ಷಿಕೆ ಮೇರೆಗೆ (2)ನೇ ಬಾಬುವಿನ ನಂತರ ಈ ಮುಂದಿನಂತೆ ಕೊನೆಯಲ್ಲಿ ಸೇರಿಸತಕ್ಕದ್ದು, ಎಂದರೆ:–

"(3) ಗ್ರೂಪ್ ಡಿ ವೃಂದದಲ್ಲಿ ಐದು ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿರಬೇಕು"

(x) ಕ್ರಮಸಂಖ್ಯೆ: 41ರಲ್ಲಿ, (4)ನೇ ಅಂಕಣದಲ್ಲಿ, **'ಅಡಿಗೆ ಕೆಲಸಗಾರ ದರ್ಜೆ–II'** ರ ಹುದ್ದೆಗಳ ಪ್ರವರ್ಗಕ್ಕೆ ಸಂಬಂಧಿಸಿದ ನಮೂದುಗಳಲ್ಲಿ **'ಮುಂಬಡ್ತಿಗಾಗಿ'** ಎಂಬ ಉಪ ಶೀರ್ಷಿಕೆಯ ಅಡಿಯಲ್ಲಿ ನಮೂದುಗಳ ತರುವಾಯ, ಈ ಮುಂದಿನವುಗಳನ್ನು ಕೊನೆಯಲ್ಲಿ ಸೇರಿಸತಕ್ಕದ್ದು, ಎಂದರೆ:–

"ಪರಂತು, ಐದು ವರ್ಷಗಳಿಗಿಂತ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿದ ವ್ಯಕ್ತಿಗಳು ಲಭ್ಯವಿಲ್ಲದಿದ್ದರೆ, ಮೂರು ವರ್ಷಗಳಿಗಿಂತ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿರುವ ವ್ಯಕ್ತಿಗಳನ್ನು ಮುಂಬಡ್ತಿಗೆ ಪರಿಗಣಿಸಬಹುದು".

(xi) ಕ್ರಮಸಂಖ್ಯೆ: 42ರಲ್ಲಿ, (4)ನೇ ಅಂಕಣದಲ್ಲಿ, **'ಗ್ರೂಪ್–ಡಿ/ ಜವಾನ(ಪೀವನ್)/ಕಾವಲುಗಾರ(ವಾಚ್‌ಮನ್)'** ಹುದ್ದೆಗಳ ಪ್ರವರ್ಗಕ್ಕೆ ಸಂಬಂಧಿಸಿದ ನಮೂದುಗಳಲ್ಲಿ, **'ನೇರ ನೇಮಕಾತಿಗಾಗಿ'** ಎಂಬ ಉಪ–ಶೀರ್ಷಿಕೆಯ ಮೇರೆಗೆ (1)ನೇ ಬಾಬುವಿಗೆ ಮತ್ತು ಅದಕ್ಕೆ ಸಂಬಂಧಿಸಿದ ನಮೂದುಗಳಿಗೆ, ಈ ಮುಂದಿನಂತೆ ಬದಲಿಯಾಗಿ ಸೇರಿಸತಕ್ಕದ್ದು, ಎಂದರೆ:–

"(1) ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಕನ್ನಡವನ್ನು ಒಂದು ವಿಷಯವಾಗಿ ತೆಗೆದುಕೊಂಡು ಉತ್ತೀರ್ಣರಾಗಿರಬೇಕು ಅಥವಾ ಅದಕ್ಕೆ ತತ್ಸಮಾನ ವಿದ್ಯಾರ್ಹತೆಯನ್ನು ಹೊಂದಿರಬೇಕು"

(xii) ಕ್ರಮಸಂಖ್ಯೆ: 43ರಲ್ಲಿ, (4)ನೇ ಅಂಕಣದಲ್ಲಿ, **'ಉದ್ಯಾನಪಾಲಕ/ಸ್ವೀಪರ್ಸ್'** ಹುದ್ದೆಗಳ ಪ್ರವರ್ಗಕ್ಕೆ ಸಂಬಂಧಿಸಿದ ನಮೂದುಗಳಲ್ಲಿ **'ನೇರ ನೇಮಕಾತಿಗೆ'** ಎಂಬ ಉಪ–ಶೀರ್ಷಿಕೆಯ ಮೇರೆಗೆ, (1)ನೇ ಬಾಬುವಿಗೆ ಮತ್ತು ಅದಕ್ಕೆ ಸಂಬಂಧಿಸಿದ ನಮೂದುಗಳಿಗೆ, ಈ ಮುಂದಿನಂತೆ ಬದಲಿಯಾಗಿ ಸೇರಿಸತಕ್ಕದ್ದು, ಎಂದರೆ:–

"(1) ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಕನ್ನಡವನ್ನು ಒಂದು ವಿಷಯವಾಗಿ ತೆಗೆದುಕೊಂಡು ಉತ್ತೀರ್ಣರಾಗಿರಬೇಕು ಅಥವಾ ಅದಕ್ಕೆ ತತ್ಸಮಾನ ವಿದ್ಯಾರ್ಹತೆಯನ್ನು ಹೊಂದಿರಬೇಕು"

(xiii) ಕ್ರಮಸಂಖ್ಯೆ: 44ರಲ್ಲಿ, (4)ನೇ ಅಂಕಣದಲ್ಲಿ, **'ಕಿಚನ್ ಮೇಟಿ'** ಹುದ್ದೆಗಳ ಪ್ರವರ್ಗಕ್ಕೆ ಸಂಬಂಧಿಸಿದ ನಮೂದುಗಳಲ್ಲಿ **'ನೇರ ನೇಮಕಾತಿಗಾಗಿ'** ಎಂಬ ಉಪ–ಶೀರ್ಷಿಕೆಯ ಮೇರೆಗೆ, (1)ನೇ ಬಾಬುವಿಗೆ ಮತ್ತು ಅದಕ್ಕೆ ಸಂಬಂಧಿಸಿದ ನಮೂದುಗಳನ್ನು, ಈ ಮುಂದಿನಂತೆ ಬದಲಿಯಾಗಿ ಸೇರಿಸತಕ್ಕದ್ದು, ಎಂದರೆ:–

"(1) ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಕನ್ನಡವನ್ನು ಒಂದು ವಿಷಯವಾಗಿ ತೆಗೆದುಕೊಂಡು ಉತ್ತೀರ್ಣರಾಗಿರಬೇಕು ಅಥವಾ ಅದಕ್ಕೆ ತತ್ಸಮಾನ ವಿದ್ಯಾರ್ಹತೆಯನ್ನು ಹೊಂದಿರಬೇಕು"

(xiv) ಕ್ರಮಸಂಖ್ಯೆ: 45ರಲ್ಲಿ, (4)ನೇ ಅಂಕಣದಲ್ಲಿ, **'ರೂಮ್ ಬಾಯ್ ಮತ್ತು ಬೇರರ್‌ಗಳು'** ಹುದ್ದೆಗಳ ಪ್ರವರ್ಗಕ್ಕೆ ಸಂಬಂಧಿಸಿದ ನಮೂದುಗಳಲ್ಲಿ **'ನೇರ ನೇಮಕಾತಿಗಾಗಿ'** ಎಂಬ ಉಪ–ಶೀರ್ಷಿಕೆಯ ಮೇರೆಗೆ, (1)ನೇ ಬಾಬುವಿಗೆ ಮತ್ತು ಅದಕ್ಕೆ ಸಂಬಂಧಿಸಿದ ನಮೂದುಗಳನ್ನು, ಈ ಮುಂದಿನಂತೆ ಬದಲಿಯಾಗಿ ಸೇರಿಸತಕ್ಕದ್ದು, ಎಂದರೆ:–

"(1) ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಕನ್ನಡವನ್ನು ಒಂದು ವಿಷಯವಾಗಿ ತೆಗೆದುಕೊಂಡು ಉತ್ತೀರ್ಣರಾಗಿರಬೇಕು ಅಥವಾ ಅದಕ್ಕೆ ತತ್ಸಮಾನ ವಿದ್ಯಾರ್ಹತೆಯನ್ನು ಹೊಂದಿರಬೇಕು".

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ॥ ಬಿ. ಎಸ್. ಮಂಜುನಾಥಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ

(ರಾಜ್ಯ ಶಿಷ್ಟಾಚಾರ–1).

## PERSONNEL AND ADMINISTRATIVE REFORMS SECRETARIAT

## NOTIFICATION

### No. DPAR 155 HET 2014, Bengaluru, Dated: 25.03.2015

Whereas the draft of the Karnataka General Services (Government Hospitality Organisation Recruitment) (Amendment) Rules, 2015, was published as required by clause (a) of sub-section (2) of section 3 of the Karnataka State Civil Services Act, 1978 (Karnataka Act No. 14 of 1990) in Notification No. DPAR 155 HET 2014, dated 19th February, 2015 in part IV-A of the Karnataka Gazette (Extra ordinary) dated 21st February, 2015 inviting objections and suggestions from all persons likely to be affected thereby within fifteen days from the date of publication in the Official Gazette.

And whereas, the said Gazette was made available to public on 21st February, 2015.

And whereas, no objections or suggestions have been received in this behalf by the State Government;

Now, therefore, in exercise of the powers conferred by sub-section (1) of section 3 read with section 8 of the Karnataka State Civil Services Act, 1978 (Karnataka Act 14 of 1990), the Government of Karnataka hereby makes the following rules, namely:-

**RULES**

**1. Title and Commencement.-** (1) These rules may be called the Karnataka General Services (Government Hospitality Organisation Recruitment) (Amendment) Rules, 2015.

(2) They shall come into force from the date of their final publication in the official Gazette.

**2. Amendment of the Schedule.-** In the Karnataka General Services (Government Hospitality Organisation Recruitment) Rules, 1986 in the schedule,-

(1) Under the heading **"A. Guest House other than Karnataka Bhavan",-**

(i) in the entries relating to the category of posts of **'Stenographers other than Karnataka Bhavan'** at serial number 8, in column (4), the following shall be inserted, namely:-

"**For promotion.-** Must have put in a service of not less than five years in the cadre of Typists.

Provided that if persons who have put in a service of not less than five years are not available, persons who have put in a service of not less than three years may be considered for promotion."

(ii) for the category of posts of **'Second Division Clerks' at** Serial Number. 11 and entries relating thereto, the following shall be substituted, namely:-

"

| | | | |
|---|---|---|---|
| 11 | Second Division Assistants | By Direct Recruitment in accordance with the Karnataka Civil Services (Recruitment to Ministerial Posts) Rules, 1978 or by transfer or promotion in accordance with the Karnataka Civil Services (Recruitment to Ministerial Posts) Rules, 1978. | |

"

(iii) in the entries relating to the category of post of **'Receptionist other than Karnataka Bhavan'** at serial number 12, in column (4), the following shall be inserted, namely:-

"Must have passed PUC or equivalent Examination with Kannada as one of the subjects or possess equivalent qualification."

(iv) in the entries relating to the category of post of **'Telephone Operators other than Karnataka Bhavan'** at serial number 14, in column (4),-

(a) under the sub-heading "**For Direct Recruitment**" for item (1) the following shall be substituted, namely:-

"(1) Must have passed PUC or Equivalent Examination with Kannada as one of the subjects or possess equivalent qualification."

(b) under the sub-heading "**For Deputation**" for item (1) the following shall be substituted, namely:-

"(1) Must have passed PUC or Equivalent Examination with Kannada as one of the subjects or possess equivalent qualification."

(v) in the entries relating to the category of posts of **'Butler Grade-I other than Karnataka Bhavan'** at serial number 16, in column (4),-

(a) after the entries under the sub-heading 'For promotion', the following shall be inserted at the end, namely:-

"Provided that if persons who have put in a service of not less than five years are not available, persons who have put in a service of not less than three years may be considered for promotion."

(b) under the sub-heading **'For Direct Recruitment'**, for item (1), the following shall be substituted, namely:-

"(1) Must have passed SSLC or equivalent examination with Kannada as one of the subjects or possess equivalent qualification."

(vi) in the entries relating to the category of posts of **'Cook Grade-I other than Karnataka Bhavan'** at serial number 17,-

(a) in column (3), the words **"if no suitable person is available for promotion by direct recruitment"** shall be omitted;

(b) after the entries in column (4), the following shall be inserted at the end, namely:-

"Provided that if persons who have put in a service of not less than five years are not available, persons who have put in a service of not less than three years may be considered for promotion."

(vii) in the entries relating to the category of posts of **'Butler Grade-II other than Karnataka Bhavan'** at serial number 18, in column (4),-

(a) under sub-heading 'For promotion', after item (1), the following shall be inserted at the end, namely:-

"Provided that if persons who have put in a service of not less than five years are not available, persons who have put in a service of not less than three years may be considered for promotion."

(b) under the sub-heading **'For Direct Recruitment'**, for item (1) and entries relating thereto, the following shall be substituted, namely:-

"(1) Must have passed SSLC or equivalent examination with Kannada as one of the subjects or possess equivalent qualification."

(viii) in the entries relating to the category of posts of **'Cook Grade-II other than Karnataka Bhavan'** at serial number 19, in column (4),-

(a) under sub-heading 'For promotion', after the item (1), the following shall be inserted at the end, namely:-

"Provided that if persons who have put in a service of not less than five years are not available, persons who have put in a service of not less than three years may be considered for promotion."

(b) under the sub-heading **'For Direct Recruitment'**, for item (1) and entries relating thereto, the following shall be substituted, namely:-

"(1) Must have passed SSLC or equivalent examination with Kannada as one of the subjects or possess equivalent qualification".

(ix) in the entries relating to the category of posts of **'Drivers other than Karnataka Bhavan'** at serial number 20, in column (4), under sub-heading "**For direct recruitment**' for the item (1) and entries relating thereto, the following shall be substituted, namely:-

"(1) Must have passed SSLC or equivalent examination with Kannada as one of the subjects or possess equivalent qualification."

(x) in the entries relating to the category of posts of **'Scooter Messenger other than Karnataka Bhavan'** at serial number 21, in column (4),-

(a) under sub-heading **'For promotion'**, after item (2), the following shall be inserted at the end, namely:-

"Provided that if persons who have put in a service of not less than five years are not available, persons who have put in a service of not less than three years may be considered for promotion."

(b) under sub-heading **'For direct recruitment'**, for item (1) and entries relating thereto, the following shall be substituted, namely:-

"(1) Must have passed SSLC or equivalent examination with Kannada as one of the subjects or possess equivalent qualification"

(xi) in the entries relating to the category of posts of **'Waiters, Bearers, Room-Boys, Caretakers, other than Karnataka Bhavan'** at serial number 23, in column (4), for item (1) and entries relating thereto, the following shall be substituted, namely:-

"(1) Must have passed SSLC or equivalent examination with Kannada as one of the subjects or possess equivalent qualification"

(xii) in the entries relating to the category of posts of **'Dalayat, Watchman, Peon, Cleaners, Turnkeys, other than Karnataka Bhavan'** at serial number 24, in column (4), for item (1), the following shall be substituted, namely:-

"(1) Must have passed SSLC or equivalent examination with Kannada as one of the subjects or possess equivalent qualification"

(xiii) in the entries relating to the category of posts of **'Gardeners, Sweepers, other than Karnataka Bhavan'** at serial number 25, in column (4), for item (1) and entries relating thereto, following shall be substituted, namely:-

"(1) Must have passed SSLC or equivalent examination with Kannada as one of the subjects or possess equivalent qualification"

(xiv) in the entries relating to the category of posts of **'Kitchen Matey/Cook Matey/Matey, other than Karnataka Bhavan'** at serial number 26, in column (4), for item (1) and entries relating thereto, the following shall be substituted, namely:-

"(1) Must have passed SSLC or equivalent examination with Kannada as one of the subjects or possess equivalent qualification".

(2) under the heading **"B. Karnataka Bhavan",-**

(i) after the entries relating to the category of posts of "Junior Engineer (Electrical)" at serial number 28A, the following shall be inserted, namely:-

"

| | | | |
|---|---|---|---|
| 28B | Senior Manager, Karnataka Bhavan. | By promotion from the cadre of Manager, Karnataka Bhavan. | Must have put in service of not less than five years in the cadre of Manager, Karnataka Bhavan. |

"

(ii) in the entries relating to the category of posts of **'Manager, Karnataka Bhavan**' at serial number 29, after the entries in column (4), the following shall be inserted at the end, namely:-

"Provided that if persons who have put in a service of not less than five years are not available, persons who have put in a service of not less than three years may be considered for promotion."

(iii) in the entries relating to the category of posts of **'Assistant Manager'** at serial number 30, in column (4), after sub-heading '**For Promotion**' and entries relating there under, the following shall be inserted at the end, namely:-

"Provided that if persons who have put in a service of not less than five years are not available, persons who have put in a service of not less than three years may be considered for promotion."

(iv) in the entries relating to the category of posts of **'Receptionist/ Telephone Operator'** at serial number 32, in column (4),-

(a) in sub-heading '**For Direct Recruitment**', for item (1) and entries relating thereto, the following shall be substituted, namely:-

"(1) Must have passed PUC Examination or possess equivalent qualification with Kannada as one of the subject"

(b) in sub-heading '**For Promotion**', after item (1), the following shall be inserted at the end, namely:-

"Provided that if persons who have put in a service of not less than five years are not available, persons who have put in a service of not less than three years may be considered for promotion."

(v) in the entries relating to the category of posts of **'Cook Gr-I'** at serial number 35, in column (4), after item (1), the following shall be inserted, namely:-

"Provided that if persons who have put in a service of not less than five years are not available, persons who have put in a service of not less than three years may be considered for promotion."

(vi) in the entries relating to the category of posts of **'Senior Electrician'** at serial number 36(a), after the entries in column (4), the following shall be inserted at the end, namely:-

"Provided that if persons who have put in a service of not less than five years are not available, persons who have put in a service of not less than three years may be considered for promotion."

(vii) in the entries relating to the category of posts of **'Senior Plumber'** at serial number 36(b), after the entries in column (4), the following shall be inserted at the end, namely:-

"Provided that if persons who have put in a service of not less than five years are not available, persons who have put in a service of not less than three years may be considered for promotion."

(viii) in the entries relating to the category of posts of **'Attender'** at serial number 37, in column (4), the following shall be inserted, namely:-

"Provided that if persons who have put in a service of not less than ten years are not available, persons who have put in a service of not less than eight years may be considered for promotion."

(ix) in the entries relating to the category of posts of **'Driver, Karnataka Bhavan'** at serial number 38 in column (4), under the sub-heading **'For Promotion',** after item (2), the following shall be inserted at the end, namely:-

"(3) Must have put in a service of not less than five years in the cadre of Group D."

(x) in the entries relating to the category of posts of **'Cook Grade-II'** at serial number 41, in column (4), after the entries under sub-heading **'For Promotion'**, the following shall be inserted at the end, namely:-

"Provided that if persons who have put in a service of not less than five years are not available, persons who have put in a service of not less than three years may be considered for promotion."

(xi) in the entries relating to the category of posts of **'Group-D/ Peon/Watchmen'** at serial number 42, in column (4), under the sub-heading **'For Direct Recruitment'**, for item (1) and entries relating thereto, the following shall be substituted, namely:-

"(1) Must have passed SSLC or equivalent examination with Kannada as one of the subjects or possess equivalent qualification".

(xii) in the entries relating to the category of posts of **'Gardner/Sweeper'** at serial number 43, in column (4), under the sub-heading **'For Direct Recruitment'**, for item (1) and entries relating thereto, the following shall be substituted, namely:-

"(1) Must have passed SSLC or equivalent examination with Kannada as one of the subjects or possess equivalent qualification".

(xiii) in the entries relating to the category of posts of **'Kitchen Matey'** at serial number 44, in column (4), under the sub-heading **'For Direct Recruitment'**, for item (1) and entries relating thereto, the following shall be substituted, namely:-

"(1) Must have passed SSLC or equivalent examination with Kannada as one of the subjects or possess equivalent qualification."

(xiv) in the entries relating to the category of posts of **'Room Boy/Bearers'** at serial number 45, in column (4), under the sub-heading **'For Direct Recruitment'**, for item (1) and entries relating thereto, the following shall be substituted, namely:-

"(1) Must have passed SSLC or equivalent examination with Kannada as one of the subjects or possess equivalent qualification."

By Order & in the name of Governor of Karnataka,

**Dr. B.S.Manjunatha Swamy**
Under Secretary ot Government
Department of Personnel and
Administrative Reforms
(State Protocol-1)

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಗುರುವಾರ, ಮಾರ್ಚ್ ೨೬, ೨೦೧೫ (ಚೈತ್ರ ೦೫, ಶಕ ವರ್ಷ ೧೯೩೭) | ನಂ. ೨೪೦ |
|---|---|---|
| **Part – IV-A** | **Bengaluru, Thursday, March 26, 2015 (Chaithra 05, Shaka Varsha 1937)** | **No. 240** |

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/13/LA Bill/2015, Bengaluru, Dated: 27-3-2015**

The following Bill was introduced in Legislative Assembly on 27-3-2015

**ಕರ್ನಾಟಕ ವಿಧಾನ ಸಭೆ**

**ಹದಿನಾಲ್ಕನೇ ವಿಧಾನ ಸಭೆ**

**ಆರನೇ ಅಧಿವೇಶನ**

**(ಮುಂದುವರೆದ ಉಪವೇಶನ)**

**ಕರ್ನಾಟಕ ಪ್ರವಾಸೋದ್ಯಮ ವ್ಯಾಪಾರ (ಸೌಲಭ್ಯ ಮತ್ತು ನಿಯಂತ್ರಣ) ವಿಧೇಯಕ, 2015**

**(2015ರ ವಿಧಾನಸಭೆಯ ವಿಧೇಯಕ ಸಂಖ್ಯೆ – 13)**

ರಾಜ್ಯದಲ್ಲಿ ಪ್ರವಾಸೋದ್ಯಮ ವ್ಯಾಪಾರದ ಸೌಲಭ್ಯ ಮತ್ತು ನಿಯಂತ್ರಣಕ್ಕಾಗಿ ಒಂದು ವಿಧೇಯಕ.

ಕರ್ನಾಟಕ ರಾಜ್ಯದಲ್ಲಿ ಪ್ರವಾಸೋದ್ಯಮ ವ್ಯಾಪಾರದ ಸೌಲಭ್ಯ ಮತ್ತು ನಿಯಂತ್ರಣ ಹಾಗೂ ಅದಕ್ಕೆ ಸಂಬಂಧಿಸಿದ ಅಥವಾ ಅದಕ್ಕೆ ಪ್ರಾಸಂಗಿಕವಾದ ವಿಷಯಗಳಿಗಾಗಿ ಉಪಬಂಧ ಕಲ್ಪಿಸುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತಾರನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**ಅಧ್ಯಾಯ–I**

**ಪ್ರಾರಂಭಿಕ**

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.**– (1) ಈ ಅಧಿನಿಯಮವನ್ನು ಕರ್ನಾಟಕ ಪ್ರವಾಸೋದ್ಯಮ ವ್ಯಾಪಾರ (ಸೌಲಭ್ಯ ಮತ್ತು ನಿಯಂತ್ರಣ) ಅಧಿನಿಯಮ 2015 ಎಂದು ಕರೆಯತಕ್ಕದ್ದು.

(2) ಇದು, ರಾಜ್ಯಪತ್ರದಲ್ಲಿ ಇದರ ಪ್ರಕಟಣೆಯಾದ ದಿನಾಂಕದಿಂದ, ಸಾಧ್ಯವಾದಷ್ಟು ಮಟ್ಟಿಗೆ ಆರು ತಿಂಗಳು ಮೀರದಂತೆ ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದ ಅಂಥ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.**– (1) ಈ ಅಧಿನಿಯಮದಲ್ಲಿ ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) "ಪರಿಷತ್ತು" ಎಂದರೆ, 3ನೇ ಪ್ರಕರಣದ ಅಡಿಯಲ್ಲಿ ರಚಿಸಲಾದ ರಾಜ್ಯ ಪ್ರವಾಸೋದ್ಯಮ ಪರಿಷತ್ತು;

(ಬಿ) "ಅಧ್ಯಕ್ಷ" ಎಂದರೆ, 3ನೇ ಪ್ರಕರಣದ ಅಡಿಯಲ್ಲಿ ರಚಿಸಲಾದ ಪರಿಷತ್ತಿನ ಅಧ್ಯಕ್ಷ;

(ಸಿ) "ಸರ್ಕಾರ" ಎಂದರೆ, ರಾಜ್ಯ ಸರ್ಕಾರ;

(ಡಿ) "ಸರ್ಕಾರಿ ಏಜೆನ್ಸಿ" ಎಂದರೆ, ಯಾವುದೇ ಕಾನೂನಿನ ಮೂಲಕ ಅಥವಾ ಅದರಡಿಯಲ್ಲಿ ಸ್ಥಾಪಿತವಾಗಿರುವ ಮತ್ತು ಸರ್ಕಾರದ ಒಡೆತನದಲ್ಲಿರುವ ಅಥವಾ ನಿಯಂತ್ರಣದಲ್ಲಿರುವ ಸರ್ಕಾರಿ ಉದ್ಯಮ, ಸ್ಥಳೀಯ ಪ್ರಾಧಿಕಾರ ಅಥವಾ ನಿಕಾಯ ಅಥವಾ ನಿಗಮ ಅಥವಾ ಸರ್ಕಾರದ ಒಡೆತನದಲ್ಲಿರುವ ಅಥವಾ ನಿಯಂತ್ರಣದಲ್ಲಿರುವ ನಿಗಮ ಅಥವಾ ನಿಕಾಯದಲ್ಲಿ ಶೇಕಡಾ ಐವತ್ತೊಂದಕ್ಕಿಂತ ಕಡಿಮೆಯಿಲ್ಲದ ಸಂದಾಯಿತ ಷೇರು ಬಂಡವಾಳವನ್ನು ಹೊಂದಿರುವ ಅಂಥ ಯಾವುದೇ ಇತರ ನಿಕಾಯ ಅಥವಾ ಪ್ರಾಧಿಕಾರ;

(ಇ) "ಸರ್ಕಾರಿ ಪ್ರವಾಸೋದ್ಯಮ ಸಂಸ್ಥೆಗಳು" ಎಂಬುದು ಪ್ರವಾಸಿ ತಾಣದ ಅಥವಾ ಪ್ರವಾಸೋದ್ಯಮದ ಅಭಿವೃದ್ಧಿ ಮತ್ತು ಸಂವರ್ಧನೆಯ ಜವಾಬ್ದಾರಿಯನ್ನು ಹೊಂದಿರುವ ಅಥವಾ ವಹಿಸಿಕೊಟ್ಟಿರುವ ರಾಜ್ಯ ಸರ್ಕಾರದ ಯಾವುದೇ ಇಲಾಖೆ ಅಥವಾ ಸರ್ಕಾರದ ಸಂಸ್ಥೆಗಳನ್ನು ಒಳಗೊಳ್ಳತಕ್ಕದ್ದು;

(ಎಫ್) "ಸ್ಥಳೀಯ ಪ್ರಾಧಿಕಾರ" ಎಂದರೆ, ಯಾವುದೇ ಗ್ರಾಮ ಪಂಚಾಯತಿ, ಪಟ್ಟಣ ಪಂಚಾಯತಿ, ಪೌರಸಭೆ, ಪೌರನಿಗಮ, ಅಭಿವೃದ್ಧಿ ಪ್ರಾಧಿಕಾರ ಅಥವಾ ಯಾವುದೇ ಪ್ರದೇಶದ ನಿಯಂತ್ರಣ ಅಥವಾ ನಿರ್ವಹಣೆಗಾಗಿ ವಹಿಸಿಕೊಡಲಾದ ಸ್ಥಳೀಯ ಸ್ವಯಂ ಆಡಳಿತಸಂಸ್ಥೆಯಾಗಿರುವ ಇತರ ಶಾಸನಬದ್ಧ ಪ್ರಾಧಿಕಾರ;

(ಜಿ) "ದುರಾಚರಣೆ" ಎಂದರೆ,-

(i) ದಳ್ಳಾಳಿತನ ಮಾಡುವುದು (touting) ವ್ಯಾಪಾರ ಮಾಡುವುದಕ್ಕಾಗಿ ಓಡಾಟ, ವಸತಿ, ಸಾರಿಗೆ, ಪ್ರೇಕ್ಷಣೀಯ ಸ್ಥಳಗಳ ದರ್ಶನದ ಸೌಲಭ್ಯಗಳನ್ನು ಪಡೆಯುವುದಕ್ಕಾಗಿ ಯಾವೊಬ್ಬ ಪ್ರವಾಸಿಗನನ್ನು ಅಥವಾ ಪ್ರವಾಸಿಗರ ಗುಂಪನ್ನು ಪೀಡಿಸುವುದು, ಅಥವಾ ಯಾವುದೇ ನಿರ್ದಿಷ್ಟ ಕಟ್ಟಡ ಅಥವಾ ವ್ಯಾಪಾರ ಸಂಸ್ಥೆಯನ್ನು ಸಂದರ್ಶಿಸುವಂತೆ ಪ್ರವಾಸಿಗನಿಗೆ ಕಿರುಕುಳವನ್ನು ನೀಡುವವರೆಗೂ ಹೋಗುವುದು ಅಥವಾ ಪ್ರವಾಸಿಯು ಉಳಿದುಕೊಳ್ಳಲು ಅಥವಾ ಏನನ್ನಾದರೂ ಖರೀದಿಸಲು ಇಚ್ಛಿಸಿದ ಪ್ರವಾಸೋದ್ಯಮ ವ್ಯಾಪಾರ ಅಥವಾ ಯಾವುದೇ ಇತರ ವ್ಯಾಪಾರ ಸಂಸ್ಥೆಯೊಂದಿಗೆ ಸಂಬಂಧಿಸಿದ ಪ್ರವಾಸೋದ್ಯಮ ಆಯೋಜಕರನ್ನೂ ಒಳಗೊಳ್ಳತಕ್ಕದ್ದು.

**ವಿವರಣೆ:-** ಯಾವೊಬ್ಬ ಪ್ರವಾಸಿಗನು ಈಗಾಗಲೇ ನೇಮಿಸಿಕೊಂಡಿರುವ ಯಾವೊಬ್ಬ ಅಂಗೀಕೃತ, ನೋಂದಾಯಿತ ಅಥವಾ ಪ್ರಾಮಾಣಿಕ ಪ್ರವಾಸೋದ್ಯಮ ಆಯೋಜಕ ಅಥವಾ ಪ್ರವಾಸಿಯು ಸ್ವಯಂಪ್ರೇರಣೆಯಿಂದ ಯಾರ ಸೇವೆಗಳನ್ನು ಬಾಡಿಗೆಗೆ ಪಡೆದಿರುವನೋ ಅಥವಾ ಆಶ್ರಯಿಸಿರುವನೋ ಅವನು, ಪ್ರವಾಸಿಗನನ್ನು ಭೇಟಿ ಮಾಡುವ ಯಾವುದೇ ಸ್ಥಳದಲ್ಲಿ ಯಾವೊಬ್ಬ ಪ್ರವಾಸಿಗನನ್ನು ಸ್ವಾಗತಿಸುವನೋ ಅಥವಾ ಸಂಪರ್ಕಿಸುವನೋ, ಅಂಥ ವ್ಯಕ್ತಿಯು ಹಾಗೆ ಸ್ವಾಗತಿಸಿದಾಗ ಅಥವಾ ಸಂಪರ್ಕಿಸಿದಾಗ, ಈ ಖಂಡದ ಅರ್ಥವ್ಯಾಪ್ತಿಯೊಳಗೆ ದಲ್ಲಾಳಿ ಮಾಡುವನೆಂದು (tout) ಪರಿಗಣಿಸತಕ್ಕದ್ದಲ್ಲ.

(ii) ಪ್ರದರ್ಶಿಸಿದ ಅಥವಾ ಘೋಷಿಸಿದ ಬೆಲೆಗಿಂತ ಹೆಚ್ಚಿನ ದರವನ್ನು ವಿಧಿಸುವುದು;

(iii) ನಿಗದಿಪಡಿಸಿದ ಸಂಭಾವನೆಗಿಂತ ಹೆಚ್ಚಿನ ಸಂಭಾವನೆಯನ್ನು ಪಡೆಯುವುದು;

(iv) ಬೆಲೆಗಳನ್ನು ಪ್ರದರ್ಶಿಸದಿರುವುದು;

(v) ದರಪಟ್ಟಿಯನ್ನು ಪ್ರದರ್ಶಿಸದಿರುವುದು;

(vi) ನಗದು ರಸೀದಿ ಅಥವಾ ಸಾಲ ರಸೀದಿ ನೀಡದಿರುವುದು;

(vii) ಒಪ್ಪಲಾದ ನಿಬಂಧನೆಗಳಿಗೆ ಅನುಸಾರವಾಗಿ ಆದೇಶವನ್ನು ಅಥವಾ ಹೊಣೆಗಾರಿಕೆಯನ್ನು ನೆರವೇರಿಸುವುದಕ್ಕಾಗಿ ನಿಗದಿಪಡಿಸಿದ ಅವಧಿಯ ಮುಕ್ತಾಯದ ತರುವಾಯವೂ, ಯುಕ್ತ ಸಮಯದೊಳಗೆ, ಕಾರ್ಯಗತಗೊಳಿಸದಿರುವುದು;

(viii) ನಿಗದಿಪಡಿಸಲಾದ ಮತ್ತು ಪ್ರದರ್ಶಿಸಲಾದ ದರಪಟ್ಟಿಗಿಂತ ಹೆಚ್ಚಾಗಿ ದರವನ್ನು ವಿದಧಿಸುವುದು;

(ix) ಪ್ರವಾಸಿಯನ್ನು ಗಿರಾಕಿಯಾಗೆಂದು ಪೀಡಿಸುವುದು (tout), ಒತ್ತಾಯಪಡಿಸುವುದು ಅಥವಾ ಬಲವಂತ ಮಾಡುವುದು ಇವಕ್ಕಾಗಿ ಯಾವುದೇ ಹಣಕಾಸಿನ ಪ್ರತಿಫಲವನ್ನು ಅಥವಾ ಕಮೀಷನ್‌ಅನ್ನು ಸ್ವೀಕರಿಸುವುದು ಮತ್ತು ಸಂದಾಯಮಾಡುವುದು;

(x) ಪ್ರವಾಸಿಗರು ಅಥವಾ ಜನಸಮೂಹವನ್ನು ಆಕರ್ಷಿಸುವ ಉದ್ದೇಶದಿಂದ, ಅರಮನೆ, ಕೋಟೆ, ಹವೇಲಿಯಂಥ ಹೆಸರುಗಳು ಮತ್ತು ಲೋಗೋಗಳನ್ನು ಅಂಥ ಸ್ಥಳಗಳಿಗೆ ಅಗತ್ಯವಿರುವ ಲಕ್ಷಣಗಳು ಇಲ್ಲದಿದ್ದರೂ ದಾರಿತಪ್ಪಿಸುವ ದೃಷ್ಟಿಯಿಂದ ಬಳಸುವುದು; ಅಥವಾ ಹೋಟೇಲ್‌ನ ತಪ್ಪಾದ ಸ್ಟಾರ್ ರೇಟಿಂಗ್ ಅನ್ನು ತೋರಿಸುವುದು ಅಥವಾ ದೀರ್ಘಕಾಲದಿಂದ ಅಸ್ತಿತ್ವದಲ್ಲಿರುವ ಮತ್ತು ಪ್ರಖ್ಯಾತವಾದುದಕ್ಕೆ ಸದೃಶವಾದ ಅಂತಹುದೇ ಹೆಸರುಗಳು ಅಥವಾ ಸಂಕ್ಷಿಪ್ತಾಕ್ಷರಗಳು ಮತ್ತು ಲೋಗೋಗಳನ್ನು ತೋರಿಸುವುದು; ಪ್ರಾಮಾಣಿಕ ಸೇವೆಯನ್ನು ಒದಗಿಸುವವರ ಅಥವಾ ಸಾರ್ವಜನಿಕ ನಿಕಾಯಗಳ ಸಂಸ್ಥೆಯ ಮತ್ತು ಪ್ರಖ್ಯಾತವಾದ ಹೆಸರನ್ನು ವರ್ಣರಂಜಿತವಾಗಿ ನಕಲು ಮಾಡುವುದು; ಮತ್ತು

(xi) ಯಾವೊಬ್ಬ ಪ್ರವಾಸಿಗನನ್ನು, ಆತನು ಇಚ್ಛಿಸದಿದ್ದರೂ ಕೂಡಾ, ಹಿಂಬಾಲಿಸುವ ಉದ್ದೇಶದೊಂದಿಗೆ ಯಾವುದೇ ಪ್ರವಾಸಿ ತಾಣ ಮತ್ತು ಹೋಟೆಲ್‌ನ ಹೊರಗೆ ಯಾವೊಬ್ಬ ಕರೆಕಳುಹಿಸದ ವ್ಯಕ್ತಿಯು (uncalled for person) ಕಾಯುತ್ತಿರುವುದು;

**ವಿವರಣೆ:-** ಈ ಖಂಡದ ಉದ್ದೇಶಗಳಿಗಾಗಿ,-

(I) ಯುಕ್ತ ಜಾಗ್ರತೆ ಮತ್ತು ಎಚ್ಚರಿಕೆಯನ್ನು ತೆಗೆದುಕೊಂಡಿದ್ದರೂ ಕೂಡಾ ಯಾವುದೇ ವ್ಯವಸ್ಥೆ ಅಥವಾ ಉಪಕರಣವು ಯಾಂತ್ರಿಕವಾಗಿ ಅಥವಾ ನೈಸರ್ಗಿಕವಾಗಿ ವಿಫಲವಾದ ಕಾರಣದಿಂದ ಸೇವೆಯಲ್ಲಿ ಆದ ವಿಳಂಬ ಅಥವಾ ತಪ್ಪನ್ನು ದುರಾಚಾರಣೆಯೆಂದು ಗಣನೆಗೆ ತೆಗೆದುಕೊಳ್ಳತಕ್ಕದ್ದಲ್ಲ;

(II) ಕೈಮೀರಿದ ಅಥವಾ ರಾಜ್ಯದ ಕ್ರಮದ ಕಾರಣದಿಂದಾಗಿ ತನ್ನ ಹೊಣೆಗಾರಿಕೆಗಳನ್ನು ನೆರವೇರಿಸುವಲ್ಲಿ ಸೇವೆ ಒದಗಿಸುವವನ ಅಸಮರ್ಥತೆಯನ್ನು ದುರಾಚರಣೆಯೆಂದು ಪರಿಗಣಿಸತಕ್ಕದ್ದಲ್ಲ;

(ಎಚ್) "ಸದಸ್ಯ" ಎಂದರೆ, 3ನೇ ಪ್ರಕರಣದ ಅಡಿಯಲ್ಲಿ ರಚನೆಯಾದ ಪರಿಷತ್ತಿನ ಸದಸ್ಯ;

(ಐ) "ಸದಸ್ಯ ಕಾರ್ಯದರ್ಶಿ" ಎಂದರೆ, 3ನೇ ಪ್ರಕರಣದ ಅಡಿಯಲ್ಲಿ ರಚನೆಯಾದ ಪರಿಷತ್ತಿನ ಸದಸ್ಯ ಕಾರ್ಯದರ್ಶಿ;

(ಜೆ) "ಉಪದ್ರವ"ವು ಯಾವುದೇ ಕೃತ್ಯವನ್ನು ಮಾಡುವುದರಿಂದ ಅಥವಾ ಮಾಡದಿರುವುದರಿಂದ ದೃಷ್ಟಿ, ವಾಸನೆ ಅಥವಾ ಶ್ರವಣ ಸಂವೇದನಾ ಶಕ್ತಿಗೆ ಗಾಯ, ಅಪಾಯ, ತೊಂದರೆಯನ್ನು ಉಂಟುಮಾಡುವ ಅಥವಾ ಉಂಟು ಮಾಡಬಹುದಾದ ಅಥವಾ ಜೀವಕ್ಕೆ ಅಪಾಯವಾದ ಅಥವಾ ಅಪಾಯವಾಗಬಹುದಾದ ಅಥವಾ ಆರೋಗ್ಯಕ್ಕೆ ಅಥವಾ ಆಸ್ತಿಗೆ ಹಾನಿಕಾರಕವಾದ ಯಾವುದೇ ಕಾರ್ಯ, ಪ್ರಕ್ರಿಯೆ, ಕಾರ್ಯಾಚರಣೆಯನ್ನು ಕೈಗೊಳ್ಳುವುದು ಇವುಗಳನ್ನು ಒಳಗೊಳ್ಳುತ್ತದೆ;

(ಕೆ) "ನಿಯಮಿಸಲಾದದು" ಎಂದರೆ, ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ನಿಯಮಗಳ ಮೂಲಕ ನಿಯಮಿಸಲಾದದು;

(ಎಲ್) "ನಿಯಮಿಸಲಾದ ಪ್ರಾಧಿಕಾರ" ಎಂದರೆ, ಈ ಅಧಿನಿಯಮದ ಉದ್ದೇಶಕ್ಕಾಗಿ ನಿಯಮಗಳ ಮೂಲಕ ರಾಜ್ಯ ಸರ್ಕಾರವು ನೇಮಕ ಮಾಡಿದ ಪ್ರಾಧಿಕಾರ. ಈ ಅಧಿನಿಯಮದ ಬೇರೆ ಬೇರೆ ಉದ್ದೇಶಗಳಿಗಾಗಿ ಬೇರೆ ಬೇರೆ ಪ್ರಾಧಿಕಾರಗಳನ್ನು ನಿಯಮಿಸಬಹುದು;

(ಎಂ) "ಸಾರ್ವಜನಿಕ ಖಾಸಗಿ ಪಾಲುದಾರಿಕೆ" ಎಂದರೆ, ಸರ್ಕಾರ ಮತ್ತು ಖಾಸಗಿ ವಲಯ ಪಾಲುದಾರನ ನಡುವೆ ಗಣನೀಯವಾದ ಹಾನಿ ಸಂಭವವನ್ನು ಹಂಚಿಕೊಳ್ಳಬೇಕಾಗಿರುವಲ್ಲಿ ಮತ್ತು ನಿರ್ದಿಷ್ಟವಾದ, ಪೂರ್ವನಿರ್ಧಾರಿತವಾದ ಮತ್ತು ಅಳೆಯಬಹುದಾದ ಕಾರ್ಯಸಾಧನೆಯ ಗುಣಮಟ್ಟಗಳಿಗೆ ಅನುಸಾರವಾಗಿನ ಕಾರ್ಯನಿರ್ವಹಣೆಗೆ ಅನುಗುಣವಾಗಿ ಪಾವತಿಗಳನ್ನು ಖಾಸಗಿವಲಯ ಪಾಲುದಾರನು ಸ್ವೀಕರಿಸುತ್ತಿದ್ದಲ್ಲಿ, ಒಂದು ನಿರ್ದಿಷ್ಟ ಅವಧಿಗಾಗಿ ಖಾಸಗಿ ವಲಯ ಪಾಲುದಾರನು ಮಾಡಲಾದ ಹೂಡಿಕೆಗಳ ಅಥವಾ ಮೂಲಕ ಕೈಗೊಂಡ ವ್ಯವಸ್ಥಾಪನೆಯ ಮೂಲಕ ಸಾರ್ವಜನಿಕ ಸ್ವತ್ತುಗಳ ಅಥವಾ ಸಾರ್ವಜನಿಕ ಪ್ರಯೋಜನಕ್ಕಾಗಿ ಸಂಬಂಧಿತ ಸೇವೆಗಳನ್ನು ಕಲ್ಪಿಸುವುದಕ್ಕಾಗಿ, ಒಂದು ಕಡೆ ಸರ್ಕಾರ ಅಥವಾ ಅದರ ಏಜೆನ್ಸಿ ಹಾಗೂ ಮತ್ತೊಂದು ಕಡೆ ಒಂದು ಖಾಸಗಿ ವಲಯ ಪಾಲುದಾರ ಇವುಗಳ ನಡುವಿನ ಒಂದು ಏರ್ಪಾಡು.

(ಎನ್) "ವಿನಿಯಮಗಳು" ಎಂದರೆ, ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ವಿನಿಯಮಗಳು;

(ಒ) "ಪ್ರವಾಸ ಮಾರ್ಗದರ್ಶಿ" ಎಂದರೆ, ಪ್ರತಿಫಲಕ್ಕಾಗಿ, ಯಾವುದೇ ಪ್ರವಾಸಿ ತಾಣವನ್ನು ಸಂದರ್ಶಿಸುವ ಪ್ರವಾಸಿಗಳ ಜೊತೆಗಿರುತ್ತಾ ಮತ್ತು ಅಂಥ ತಾಣಕ್ಕೆ ಸಂಬಂಧಿಸಿದ, ಮಹತ್ವದ, ಚಾರಿತ್ರಿಕ, ಪುರಾತತ್ವ ಶಾಸ್ತ್ರ, ಸಸ್ಯವಿಜ್ಞಾನ, ಜನಾಂಗಶಾಸ್ತ್ರ, ಸಾಂಸ್ಕೃತಿಕ, ಸಾಮಾಜಿಕ ಅಥವಾ ಇತರ ಆಸಕ್ತಿಕರವಾದ ಯಾವುದೇ ವಿಷಯಕ್ಕೆ ಸಂಬಂಧಿಸಿದ ಮಾಹಿತಿಯನ್ನು ಒದಗಿಸುವ ಅಥವಾ ವ್ಯಾಖ್ಯಾನವನ್ನು ಮಾಡುವ ಒಬ್ಬ ವ್ಯಕ್ತಿ;

(ಪಿ) "ಪ್ರವಾಸೋದ್ಯಮ ವ್ಯಾಪಾರ" ಎಂದರೆ, ಒಂದು ಆವರಣದಲ್ಲಿ ಅಥವಾ ನಿಯಮಿತವಾಗಿ ಅಥವಾ ಸಾಂದರ್ಭಿಕವಾಗಿ ಯಾವೊಬ್ಬ ವ್ಯಕ್ತಿಯು ಅಥವಾ ಪ್ರವಾಸಿ ಏಜೆನ್ಸಿಯು ಪ್ರವಾಸಿಯೊಬ್ಬನಿಗೆ, ನಿಯಮಿಸಬಹುದಾದಂತೆ, ಒದಗಿಸುವ ಪ್ರವಾಸಕ್ಕೆ ಸಂಬಂಧಿಸಿದ ಅಂಥ ಸೌಲಭ್ಯಗಳ ವರ್ಗ ಅಥವಾ ಚಟುವಟಿಕೆಗಳು ಅಥವಾ ಉತ್ಪನ್ನಗಳು ಮತ್ತು ವೈದ್ಯಕೀಯ ಪ್ರವಾಸೋದ್ಯಮ, ಜೀವಪರಿಸರ ಪ್ರವಾಸೋದ್ಯಮ, ಗ್ರಾಮೀಣ ಪ್ರವಾಸೋದ್ಯಮ, ಜಲಪ್ರವಾಸೋದ್ಯಮ, ಗುಂಪುಗಳಲ್ಲಿ ಪ್ರಯಾಣ ಮಾಡುವ ಪ್ರವಾಸೋದ್ಯಮ (caravan tourism) ಮತ್ತು ಸಾಹಸ ಪ್ರವಾಸೋದ್ಯಮ ಅಥವಾ ಯಾವುದೇ ಹೆಸರಿನಿಂದ ಕರೆಯಲ್ಪಡುವ ಯಾವುದೇ ಇತರ ವರ್ಗದ ಪ್ರವಾಸೋದ್ಯಮ ಮತ್ತು ನಿಯಮಿಸಬಹುದಾದಂಥ ಹೋಂಸ್ಟೇ, ಹೊಟೇಲ್, ರೆಸಾರ್ಟ್, ಆರೋಗ್ಯಧಾಮ, ಸಂದರ್ಶಕ ಮಾಹಿತಿ ಕೇಂದ್ರ, ಅರ್ಥವಿವರಿಸುವ ಕೇಂದ್ರ, ಜಲಕ್ರೀಡೆಗಳು, ದೋಣಿ ಮನೆ, ಹಾದಿ ಬದಿಯ ಸೌಕರ್ಯ, ಶಯನಾಗಾರಗಳು ಇವುಗಳನ್ನು ಒಳಗೊಂಡಂತೆ ಪ್ರವಾಸೋದ್ಯಮಕ್ಕೆ ಸಂಬಂಧಪಟ್ಟ ಸೌಲಭ್ಯಗಳು ಅಥವಾ ಚಟುವಟಿಕೆಗಳನ್ನು ಒಳಗೊಳ್ಳುತ್ತದೆ;

(ಕ್ಯೂ) ಪ್ರವಾಸೋದ್ಯಮಕ್ಕೆ ಸಂಬಂಧಿಸಿದಂತೆ "ಪ್ರವಾಸೋದ್ಯಮ ಆಯೋಜಕ" ಎಂದರೆ, ಪ್ರವಾಸೋದ್ಯಮ ವ್ಯಾಪಾರವನ್ನು ನಡೆಸುವ ಅಥವಾ ನಿರ್ವಹಿಸುವ ಅಥವಾ ಅದರ ವ್ಯವಸ್ಥಾಪನೆಗೆ ಹೊಣೆಗಾರನಾಗಿರುವ ಯಾವೊಬ್ಬ ವ್ಯಕ್ತಿ, ಕಂಪನಿ, ಸಂಘ ಅಥವಾ ಪಾಲುದಾರಿಕೆ ಸಂಸ್ಥೆ (firm) ಅಥವಾ ಯಾವುದೇ ಇತರ ನಿಕಾಯ;

(ಆರ್) "ಪ್ರವಾಸಿ" ಎಂದರೆ, ಸಂದರ್ಶಿಸಿದ ಸ್ಥಳದೊಳಗಿನ ಕೆಲಸಕ್ಕೆ ಸಂಬಂಧಿಸಿದ ಸಂಭಾವನೆಯನ್ನು ಪಡೆಯುವ ಚಟುವಟಿಕೆಯಲ್ಲದ ಯಾವುದೇ ಉದ್ದೇಶಕ್ಕಾಗಿ, ಇಪ್ಪತ್ತನಾಲ್ಕು ಗಂಟೆಗಳಿಗಿಂತ ಹೆಚ್ಚಾಗಿ ಆದರೆ ಒಂದು ಕ್ರಮಾನುಗತ ವರ್ಷಕ್ಕಿಂತ ಹೆಚ್ಚಾಗದೇ ತನ್ನ ಸಾಮಾನ್ಯ ವಾಸಸ್ಥಳದಿಂದ ಹೊರಗಿನ ಸ್ಥಳದಲ್ಲಿ ಪ್ರವಾಸ ಮಾಡುವ ಮತ್ತು ಇರುವ ಒಬ್ಬ ವ್ಯಕ್ತಿ;

**ವಿವರಣೆ:**– ಈ ಖಂಡದ ಉದ್ದೇಶಗಳಿಗಾಗಿ,–

(i) ರಾಜ್ಯದಲ್ಲಿ ವಾಸದಮನೆಯನ್ನು ಕಟ್ಟಲು ಬರುವ ವ್ಯಕ್ತಿ;

(ii) ಬಂಧುಗಳು ಮತ್ತು ಸ್ನೇಹಿರತನ್ನು ಭೇಟಿ ಮಾಡುವುದಕ್ಕಾಗಿ ಮತ್ತು ಕಚೇರಿ ಕೆಲಸ, ಸಾಮಾಜಿಕ ಮತ್ತು ಧಾರ್ಮಿಕ ಸಮಾರಂಭಗಳು ಇತ್ಯಾದಿಗಳಿಗೆ ಹಾಜರಾಗುವ ಉದ್ದೇಶದಿಂದ ತಮ್ಮ ಸ್ವ–ಗ್ರಾಮವನ್ನು ಅಥವಾ ತವರು ಸ್ಥಳವನ್ನು ಸಂದರ್ಶಿಸುವ ಮತ್ತು ತಮ್ಮ ಸ್ವಂತಮನೆಗಳಲ್ಲಿ ಅಥವಾ ಬಂಧುಗಳು ಮತ್ತು ಸ್ನೇಹಿತರೊಂದಿಗೆ ಇರುವ ಮತ್ತು ಯಾವುದೇ ಪ್ರವಾಸೋದ್ಯಮ ಸೌಲಭ್ಯಗಳನ್ನು ಬಳಸಿಕೊಳ್ಳದಿರುವ ವ್ಯಕ್ತಿಗಳು;

(iii) ರಾಜ್ಯದಲ್ಲಿ ಕೆಲಸ ಅಥವಾ ಉದ್ಯೋಗವನ್ನು ಪಡೆದುಕೊಂಡು ರಾಜ್ಯದಲ್ಲಿ ಮನೆಮಾಡಿಕೊಂಡಿರುವ ವಿದೇಶಿಗರು,

–ಇವರುಗಳನ್ನು ಪ್ರವಾಸಿಗಳು ಎಂದು ಪರಿಗಣಿಸತಕ್ಕದ್ದಲ್ಲ.

(ಎಸ್) "ಪ್ರವಾಸಿ ತಾಣ" ಎಂದರೆ, ಪ್ರವಾಸಿಯು ಮೇಲಿಂದ ಮೇಲೆ ಸಂದರ್ಶಿಸುವ ಮತ್ತು ಈ ಬಗ್ಗೆ ಸರ್ಕಾರವು ಅಧಿಸೂಚಿಸಬಹುದಾದ ಕರ್ನಾಟಕ ರಾಜ್ಯದಲ್ಲಿನ ಯಾವುದೇ ಅಂಥ ಪ್ರದೇಶ, ಸ್ಥಳ, ನಿವೇಶನ ಅಥವಾ ಜಾಗ;

(ಟಿ) "ಪ್ರವಾಸಿ ಮಿತ್ರ" ಎಂದರೆ, 17ನೇ ಪ್ರಕರಣದ ಅಡಿಯಲ್ಲಿ ನೇಮಕವಾದ ಪ್ರವಾಸಿ ಮಿತ್ರ;

(ಯು) "ಟೌಟಿಂಗ್(ಗಿರಾಕಿಯಾಗೆಂದು ಪೀಡಿಸುವುದು)" ಎಂಬುದು ಯಾವುದೇ ವ್ಯಾಪಾರ ಮಾಡುವುದಕ್ಕಾಗಿ, ವಸತಿಗಾಗಿ, ಸಾರಿಗೆಗಾಗಿ, ಸ್ಥಳ ವೀಕ್ಷಣೆಗಾಗಿ ಮರುಳು ಮಾಡುವುದು, ತಪ್ಪುದಾರಿಗೆ ಎಳೆಯುವುದು ಅಥವಾ ಬಲವಂತಪಡಿಸುವುದು, ನಿರ್ದಿಷ್ಟ ಕಟ್ಟಡಗಳಿಗೆ ಮತ್ತು ಅವುಗಳ ಆವರಣಗಳಿಗೆ ಬರುವಂತೆ ಒತ್ತಾಯಪಡಿಸುವುದು ಅಥವಾ ವೈಯಕ್ತಿಕ ಪ್ರತಿಫಲಕ್ಕಾಗಿ ಯಾವೊಬ್ಬ ವ್ಯಕ್ತಿ, ಸಂಸ್ಥೆ, ವ್ಯಾಪಾರಿ ಅಥವಾ ಉತ್ಪಾದಕನನ್ನು ಪೀಡಿಸುವುದನ್ನು ಒಳಗೊಳ್ಳುತ್ತದೆ.

**ವಿವರಣೆ:** ಅಪೇಕ್ಷಿಸದ ಸೇವೆಯನ್ನು ಒದಗಿಸುವ ಉದ್ದೇಶದಿಂದ, ಅನ್ಯಥಾ ಯಾವುದೇ ಯುಕ್ತಕಾರಣವಿಲ್ಲದೆ ವಿಮಾನ ನಿಲ್ದಾಣಗಳು, ರೈಲ್ವೆ ನಿಲ್ದಾಣಗಳು, ಬಸ್ ನಿಲ್ದಾಣಗಳು, ಮಾರುಕಟ್ಟೆಗಳು ಅಥವಾ ಪ್ರವಾಸಿಗರು ಮೇಲಿಂದಮೇಲೆ ಬರುವ ಯಾವುವೇ ಇತರ ಸ್ಥಳಗಳ ಸುತ್ತಮುತ್ತ, ಅಲೆದಾಡುತ್ತಿರುವ ಅಥವಾ ಯಾವುದೇ ಅಂಥ ಸೇವೆಯನ್ನು ಬಳಸುವಂತೆ ಪೀಡಿಸುವ ಅಥವಾ ಒತ್ತಾಯಪಡಿಸುವ ಮತ್ತು ಅಂಥ ಉದ್ದೇಶವನ್ನು (ಹಿಂಬಾಲಿಸುವುದು, ವಾದಮಾಡುವುದು, ಸಂಪರ್ಕಿಸುವುದು ಅಥವಾ ಮಾತುಗಳು ಅಥವಾ ಸಂಜ್ಞೆಗಳು ಅಥವಾ ಪ್ರಕಟಣಾ ಪತ್ರಗಳು ಅಥವಾ ಕರಪತ್ರಗಳ ಮೂಲಕ ಅನ್ಯಥಾ ಪ್ರವಾಸಿಗರ ಗಮನವನ್ನು ಸೆಳೆಯುವುದು ಮತ್ತು ಅದರಿಂದಾಗಿ ಪ್ರವಾಸಿಗರಿಗೆ ಅಥವಾ ಸಾಮಾನ್ಯ ಜನರಿಗೆ ಅಡಚಣೆ ಅಥವಾ ಕಿರುಕುಳ ಉಂಟುಮಾಡುವಂತೆ ಮಾಡುವುದು) ಮತ್ತು ಅನ್ಯಥಾ ಯಾವುದೇ ಯುಕ್ತಕಾರಣವಿಲ್ಲದೆ ಮತ್ತು ಅಂಥ ಸ್ಥಳಕ್ಕೆ ಮೇಲಿಂದ ಮೇಲೆ ಬರುವ ಯಾವೊಬ್ಬನನ್ನು ಟೌಟಿಂಗ್ (ಗಿರಾಕಿಗಳಿಗೆ ಕಿರುಕುಳ ನೀಡುವ) ಕೃತ್ಯ ಮಾಡಿದ್ದಾನೆಂದು ಭಾವಿಸತಕ್ಕದ್ದು.

(ವಿ) "ಪ್ರವಾಸಿ ಏಜೆಂಟ್" ಎಂದರೆ, ಟಿಕೇಟು ನೀಡುವುದು, ಸಾರಿಗೆ, ವೀಸಾ, ಸ್ಥಳಾವಕಾಶ, ಮಾರ್ಗದರ್ಶಿ ಪ್ರವಾಸಗಳು, ಆಯೋಜಿತ ವಿಹಾರಗಳು ಅಥವಾ ನಿಯಮಿಸಬಹುದಾದ ಅಂಥ ಇತರ ವ್ಯವಸ್ಥೆಗಳನ್ನು ಒಳಗೊಂಡಂತೆ ಪ್ರವಾಸಿಗರಿಗಾಗಿ ಪ್ರವಾಸಿ ಏರ್ಪಾಡುಗಳನ್ನು ಕಲ್ಪಿಸುವ ವ್ಯವಸ್ಥೆ ಮಾಡುವ ಸಲಹೆ ನೀಡುವ ಅಥವಾ ಕೈಗೊಳ್ಳುವ ಯಾವೊಬ್ಬ ವ್ಯಕ್ತಿ ಅಥವಾ ಏಜೆನ್ಸಿ;

(ಡಬ್ಲ್ಯೂ) "ಉಪಾಧ್ಯಕ್ಷ" ಎಂದರೆ, 3ನೇ ಪ್ರಕರಣದ ಅಡಿಯಲ್ಲಿ ರಚನೆಯಾದ ಪರಿಷತ್ತಿನ ಉಪಾಧ್ಯಕ್ಷ.

## ಅಧ್ಯಾಯ–II

### ಸಾಂಸ್ಥಿಕ ಚೌಕಟ್ಟು

**3. ರಾಜ್ಯ ಪ್ರವಾಸೋದ್ಯಮ ಪರಿಷತ್ತಿನ ರಚನೆ.–** (1) ರಾಜ್ಯ ಸರ್ಕಾರವು, ಈ ಅಧಿನಿಯಮ ಪ್ರಾರಂಭವಾದ ತರುವಾಯ ಸಾಧ್ಯವಾದಷ್ಟು ಬೇಗನೆ, ಆದರೆ ಈ ಅಧಿನಿಯಮವು ಪ್ರಾರಂಭವಾದ ದಿನಾಂಕದಿಂದ ಆರು ತಿಂಗಳುಗಳಿಗೆ ಮೀರದೆ, ಅಧಿಸೂಚನೆಯ ಮೂಲಕ, ಈ ಮುಂದಿನ ಸದಸ್ಯರನ್ನು ಒಳಗೊಂಡಿರುವ "ಕರ್ನಾಟಕ ರಾಜ್ಯ ಪ್ರವಾಸೋದ್ಯಮ ಪರಿಷತ್ತು" (ಇಲ್ಲಿ ಇನ್ನು ಮುಂದೆ "ಪರಿಷತ್ತು" ಎಂದು ಉಲ್ಲೇಖಿಸಿದೆ) ಎಂದು ಕರೆಯಲಾಗುವ ಒಂದು ಪರಿಷತ್ತನ್ನು ರಚಿಸತಕ್ಕದ್ದು, ಎಂದರೆ:–

| | |
|---|---|
| (ಎ) ಮುಖ್ಯ ಮಂತ್ರಿ, ಕರ್ನಾಟಕ ಸರ್ಕಾರ | ಅಧ್ಯಕ್ಷ |
| (ಬಿ) ಪ್ರವಾಸೋದ್ಯಮ ಸಚಿವ, ಕರ್ನಾಟಕ ಸರ್ಕಾರ | ಉಪಾಧ್ಯಕ್ಷ |
| (ಸಿ) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಪ್ರವಾಸೋದ್ಯಮ ಇಲಾಖೆ. | ಸದಸ್ಯ |
| (ಡಿ) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ | ಸದಸ್ಯ |
| (ಇ) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಒಳಾಡಳಿತ ಇಲಾಖೆ | ಸದಸ್ಯ |
| (ಎಫ್) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಮೂಲಸೌಕರ್ಯಗಳ ಅಭಿವೃದ್ಧಿ ಇಲಾಖೆ | ಸದಸ್ಯ |
| (ಜಿ) ಸರ್ಕಾರದ ಕಾರ್ಯದರ್ಶಿ, ಮಾಹಿತಿ ತಂತ್ರಜ್ಞಾನ ಇಲಾಖೆ | ಸದಸ್ಯ |
| (ಎಚ್) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ | ಸದಸ್ಯ |
| (ಐ) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ ಮತ್ತು ಒಳನಾಡು ಜಲಸಾರಿಗೆ ಇಲಾಖೆ | ಸದಸ್ಯ |
| (ಜೆ) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ | ಸದಸ್ಯ |
| (ಕೆ) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಅರಣ್ಯ, ಜೀವಿ ಪರಿಸರ ಮತ್ತು ಪರಿಸರ ಇಲಾಖೆ | ಸದಸ್ಯ |
| (ಎಲ್) ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ | ಸದಸ್ಯ–ಕಾರ್ಯದರ್ಶಿ |
| (ಎಂ) ಪ್ರವಾಸ ಮತ್ತು ಪ್ರವಾಸೋದ್ಯಮ ವಲಯದ ಸಂಬಂಧಪಟ್ಟ ಉದ್ಯಮದಲ್ಲಿ ತೊಡಗಿಕೊಂಡಿರುವವರ ಪೈಕಿ ಸಾಕಷ್ಟು ಜ್ಞಾನವುಳ್ಳ ಮತ್ತು ಅವರವರ ಸಂಬಂಧಪಟ್ಟ ಕ್ಷೇತ್ರದಲ್ಲಿ ಕನಿಷ್ಠ ಹದಿನೈದು ವರ್ಷಗಳ ವೃತ್ತಿ ಅನುಭವ ಹೊಂದಿರುವ ಹಾಗೂ ರಾಜ್ಯದಲ್ಲಿ ಪ್ರವಾಸೋದ್ಯಮವನ್ನು ಉತ್ತೇಜಿಸುವುದಕ್ಕಾಗಿ ಕಾರ್ಯತಂತ್ರಗಳನ್ನು ರೂಪಿಸುವಲ್ಲಿ ಅಂತರ್‌ದೃಷ್ಟಿಯನ್ನು (insights) ಕಲ್ಪಿಸುವ ಹಂತದಲ್ಲಿರುವ, ರಾಜ್ಯ ಸರ್ಕಾರವು, ನಾಮ ನಿರ್ದೇಶಿಸಿದ ಆರು ಸದಸ್ಯರುಗಳು, ಅವರಲ್ಲಿ ಕನಿಷ್ಠ ಪಕ್ಷ ಒಬ್ಬ ವ್ಯಕ್ತಿಯು ಅನುಸೂಚಿತ ಜಾತಿಗಳು ಅಥವಾ ಅನುಸೂಚಿತ ಬುಡಕಟ್ಟುಗಳಿಗೆ ಸೇರಿದವನಾಗಿರತಕ್ಕದ್ದು ಹಾಗೂ ಒಬ್ಬ ಮಹಿಳೆ ಇರತಕ್ಕದ್ದು. | ಅಧಿಕಾರೇತರ ಸದಸ್ಯರು |

ಮತ್ತು ಪರಂತು, ಅಧ್ಯಕ್ಷನು ತಾನು ಅವಶ್ಯಕವೆಂದು ಭಾವಿಸುವ ಯಾವೊಬ್ಬ ವ್ಯಕ್ತಿಯನ್ನು ವಿಶೇಷ ಆಹ್ವಾನಿತನನ್ನಾಗಿ ಪರಿಷತ್ತಿಗೆ ಆಹ್ವಾನಿಸಬಹುದು.

(2) ಪರಿಷತ್ತಿನ ಕೇಂದ್ರ ಕಾರ್ಯ ಸ್ಥಾನವು ಬೆಂಗಳೂರಿನಲ್ಲಿರತಕ್ಕದ್ದು ಅಥವಾ ಸರ್ಕಾರವು ಅಧಿಸೂಚಿಸಬಹುದಾದ ಅಂಥ ಇತರ ಸ್ಥಳದಲ್ಲಿರತಕ್ಕದ್ದು.

**4. ಅಧಿಕಾರೇತರ ಸದಸ್ಯರ ಪದದ ಅವಧಿ ಮತ್ತು ಸೇವಾ ಷರತ್ತುಗಳು.–** (1) ನಾಮನಿರ್ದೇಶಿತ ಅಧಿಕಾರೇತರ ಸದಸ್ಯರು ರಾಜ್ಯ ಸರ್ಕಾರದ ಇಚ್ಛೆಗೊಳಪಟ್ಟು, ಮೂರು ವರ್ಷಗಳನ್ನು ಮೀರದ ಅವಧಿಗಾಗಿ ಪದದಲ್ಲಿರತಕ್ಕದ್ದು. ಆದಾಗ್ಯೂ, ಅಧಿಕಾರೇತರ ಸದಸ್ಯರು ಮೂರು ವರ್ಷಗಳ ಹೆಚ್ಚಿನ ಅವಧಿಗಾಗಿ ಮರುನೇಮಕವಾಗಬಹುದು.

(2) ಒಬ್ಬ ಅಧಿಕಾರೇತರ ಸದಸ್ಯನು ರಾಜ್ಯ ಸರ್ಕಾರಕ್ಕೆ ವೈಯಕ್ತಿಕವಾಗಿ ಪತ್ರ ಬರೆಯುವ ಮೂಲಕ ತನ್ನ ಪದಕ್ಕೆ ರಾಜೀನಾಮೆಯನ್ನು ನೀಡಬಹುದು. ಆದರೆ ರಾಜೀನಾಮೆಯು ಅಂಗೀಕಾರವಾಗುವವರೆಗೂ ತನ್ನ ಪದದಲ್ಲಿ ಮುಂದುವರೆಯತಕ್ಕದ್ದು.

(3) ಅಧಿಕಾರೇತರ ಸದಸ್ಯನು ವಿನಿಯಮಗಳಲ್ಲಿ ಉಪಬಂಧಿಸಬಹುದಾದ ಅಂಥ ಭತ್ಯೆಗಳನ್ನು ಸ್ವೀಕರಿಸತಕ್ಕದ್ದು.

**5. ಅಧ್ಯಕ್ಷನ ಅಧಿಕಾರಗಳು.–** (1) ಅಧ್ಯಕ್ಷನು ಪರಿಷತ್ತಿನ ವ್ಯವಹಾರಗಳ ನಿರ್ವಹಣೆಯಲ್ಲಿ ಸಾಮಾನ್ಯ ಮೇಲ್ವಿಚಾರಣೆ ಮತ್ತು ನಿರ್ದೇಶನಗಳ ಅಧಿಕಾರವನ್ನು ಹೊಂದಿರತಕ್ಕದ್ದು.

(2) ಅಧ್ಯಕ್ಷನು, ಪರಿಷತ್ತಿನ ಸಭೆಗಳ ಅಧ್ಯಕ್ಷತೆಯನ್ನು ವಹಿಸತಕ್ಕದ್ದು ಹಾಗೂ ವಿನಿಮಯಗಳ ಅನುಸಾರ ಆತನಲ್ಲಿ ನಿಹಿತವಾದ ಪರಿಷತ್ತಿನ ಅಧಿಕಾರಗಳು ಮತ್ತು ಪ್ರಕಾರ್ಯಗಳನ್ನು ಚಲಾಯಿಸತಕ್ಕದ್ದು ಹಾಗೂ ನಿರ್ವಹಿಸತಕ್ಕದ್ದು.

**6. ಪರಿಷತ್ತಿನ ಸಭೆಗಳು.–** (1) ವಿನಿಯಮಗಳಲ್ಲಿ ಉಪಬಂಧಿಸಬಹುದಾದ ಅಂಥ ಸಮಯಗಳಲ್ಲಿ ಮತ್ತು ಸ್ಥಳಗಳಲ್ಲಿ ಪರಿಷತ್ತು ಸಭೆ ಸೇರತಕ್ಕದ್ದು ಹಾಗೂ ಕೋರಂ ಒಳಗೊಂಡಂತೆ ಸಭೆಗಳಲ್ಲಿನ ವ್ಯವಹಾರ ನಿರ್ವಹಣೆಗೆ ಸಂಬಂಧಿಸಿದ ಅಂಥ ಪ್ರಕ್ರಿಯೆಯನ್ನು ಅನುಸರಿಸತಕ್ಕದ್ದು.

(2) ಪರಿಷತ್ತಿನ ಅಧ್ಯಕ್ಷನು, ಅಥವಾ ಆತನ ಗೈರು ಹಾಜರಿಯಲ್ಲಿ ಉಪಾಧ್ಯಕ್ಷನು, ಮತ್ತು ಅಧ್ಯಕ್ಷ ಹಾಗೂ ಉಪಾಧ್ಯಕ್ಷ ಇಬ್ಬರ ಗೈರು ಹಾಜರಿಯಲ್ಲಿ, ಹಾಜರಿರುವ ಸದಸ್ಯರು ತಮ್ಮ ಪೈಕಿಯಿಂದ ಆಯ್ಕೆ ಮಾಡುವ ಯಾವೊಬ್ಬ ಇತರ ಸದಸ್ಯನು ಪರಿಷತ್ತಿನ ಸಭೆಯ ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

(3) ಪರಿಷತ್ತಿನ ಸಭೆಯ ಎಲ್ಲಾ ಪ್ರಶ್ನೆಗಳನ್ನು ಹಾಜರಿರುವ ಸದಸ್ಯರ ಮತಗಳ ಬಹುಮತದಿಂದ ಹಾಗೂ ಮತದಾನದಿಂದ ನಿರ್ಧರಿಸತಕ್ಕದ್ದು ಮತ್ತು ಸಮಾನ ಮತಗಳು ಬಂದ ಸಂದರ್ಭದಲ್ಲಿ, ಅಧ್ಯಕ್ಷತೆ ವಹಿಸಿರುವ ವ್ಯಕ್ತಿಯು, ಎರಡನೇ ಅಥವಾ ನಿರ್ಣಾಯಕ ಮತ ಹೊಂದಿರತಕ್ಕದ್ದು.

(4) ಪರಿಷತ್ತಿನ ಯಾವುದೇ ಕಾರ್ಯ ಅಥವಾ ನಡವಳಿಯು,–

(ಎ) ಯಾವುದೇ ಖಾಲಿಸ್ಥಾನವಿದ್ದ ಅಥವಾ ಪರಿಷತ್ತಿನ ರಚನೆಯಲ್ಲಿ ಯಾವುದೇ ನ್ಯೂನ್ಯತೆಯಿದ್ದ; ಅಥವಾ

(ಬಿ) ಪರಿಷತ್ತಿನ ಅಧ್ಯಕ್ಷ ಅಥವಾ ಉಪಾಧ್ಯಕ್ಷ ಅಥವಾ ಸದಸ್ಯನಾಗಿ ಕಾರ್ಯನಿರ್ವಹಿಸುತ್ತಿರುವ ವ್ಯಕ್ತಿಯ ನೇಮಕಾತಿಯಲ್ಲಿ ಯಾವುದೇ ನ್ಯೂನ್ಯತೆ ಇದ್ದ; ಅಥವಾ

(ಸಿ) ಮೊಕದ್ದಮೆಯ ಗುಣಾವಗುಣಗಳಿಗೆ ಬಾಧಕವಾಗದ ಪರಿಷತ್ತಿನ ಪ್ರಕ್ರಿಯೆಗಳಲ್ಲಿನ ಯಾವುದೇ ಕ್ರಮದೋಷದ,

–ಕಾರಣ ಮಾತ್ರದಿಂದ ಅಸಿಂಧುವಾಗತಕ್ಕದ್ದಲ್ಲ.

**7. ಪರಿಷತ್ತಿನ ಅಧಿಕಾರಗಳು ಮತ್ತು ಪ್ರಕಾರ್ಯಗಳು.–** (1) ಪರಿಷತ್ತು,–

(ಎ) ಪ್ರವಾಸೋದ್ಯಮ ಅಭಿವೃದ್ಧಿ ಮತ್ತು ಉತ್ತೇಜನಕ್ಕೆ ಸಂಬಂಧಿಸಿದ ವಿಷಯದಲ್ಲಿ ಶೃಂಗ ಸಂಸ್ಥೆಯಾಗಿ ಕಾರ್ಯನಿರ್ವಹಿಸತಕ್ಕದ್ದು;

(ಬಿ) ಪ್ರವಾಸೋದ್ಯಮದ ಅಭಿವೃದ್ಧಿ ಮತ್ತು ಉತ್ತೇಜನಕ್ಕೆ ಸಂಬಂಧಿಸಿದ ವಿಷಯದಲ್ಲಿ ಸರ್ಕಾರಕ್ಕೆ ಶಿಫಾರಸ್ಸುಗಳನ್ನು ಮಾಡತಕ್ಕದ್ದು.

(ಸಿ) ಈ ಅಧಿನಿಯಮದ ಅಡಿಯಲ್ಲಿನ ತನ್ನ ಪ್ರಕಾರ್ಯಗಳ ನಿರ್ವಹಣೆಯಲ್ಲಿ ಸರ್ಕಾರಿ ಪ್ರವಾಸೋದ್ಯಮ ಸಂಸ್ಥೆಗಳಿಗೆ ಸೂಚನೆಗಳನ್ನು ಮತ್ತು ಸಲಹೆಗಳನ್ನು ನೀಡತಕ್ಕದ್ದು;

(ಡಿ) ಸರ್ಕಾರಿ ಪ್ರವಾಸೋದ್ಯಮ ಸಂಸ್ಥೆಗಳು ನಡೆಸುತ್ತಿರುವ ಪ್ರವಾಸೋದ್ಯಮಕ್ಕೆ ಸಂಬಂಧಿಸಿದ ಕ್ರಯ ವಿಕ್ರಯ ಅಥವಾ ಉತ್ತೇಜನ ಕಾರ್ಯಚಟುವಟಿಕೆಯನ್ನು ಸಮನ್ವಯಗೊಳಿಸತಕ್ಕದ್ದು ಮತ್ತು ಬೆಂಬಲಿಸತಕ್ಕದ್ದು;

(ಇ) ರಾಜ್ಯ ಪ್ರವಾಸೋದ್ಯಮ ವಲಯವನ್ನು ಅಭಿವೃದ್ಧಿ ಪಡಿಸಲು ಕೇಂದ್ರ ಸರ್ಕಾರ, ನೆರೆ ರಾಜ್ಯಗಳು ಮತ್ತು ಇತರ ಪ್ರವಾಸೋದ್ಯಮ ಸಂಬಂಧಿ ಏಜೆನ್ಸಿಗಳೊಂದಿಗೆ ಸಹಯೋಗದಿಂದ ಕಾರ್ಯನಿರ್ವಹಿಸತಕ್ಕದ್ದು; ಮತ್ತು

(ಎಫ್) ನಿಯಮಿಸಬಹುದಾದ ಯಾವುದೇ ಇತರ ಅಧಿಕಾರಗಳು ಅಥವಾ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು.

(2) ಪರಿಷತ್ತು, ತನ್ನ ಪ್ರಕಾರ್ಯಗಳ ನೆರವೇರಿಕೆಗೆ ವಿಹಿತವಾದ ಅಥವಾ ಯುಕ್ತವಾಗಿ ಅವಶ್ಯಕವಾದ, ಅಥವಾ ಅನುಷಂಗಿಕವಾದ ಎಲ್ಲವನ್ನೂ ಮಾಡಲು ಅಧಿಕಾರವನ್ನು ಹೊಂದಿರತಕ್ಕದ್ದು.

(3) ಪರಿಷತ್ತು, ವಿನಿಯಮಗಳ ಮೂಲಕ, ತನ್ನ ಪ್ರಕಾರ್ಯಗಳ ನಿರ್ವಹಣೆಯಲ್ಲಿ ಪರಿಷತ್ತಿಗೆ ಸಹಾಯಕವಾಗಲು ಅವಶ್ಯಕವೆಂದು ಭಾವಿಸಬಹುದಾದ ಒಂದು ಅಥವಾ ಹೆಚ್ಚಿನ ಸಮಿತಿಗಳನ್ನು ಸ್ಥಾಪಿಸಬಹುದು ಮತ್ತು ಹಾಗೆ ಸ್ಥಾಪಿಸಲಾದ ಸಮಿತಿಗಳಿಗೆ ಅದು ಸೂಕ್ತವೆಂದು ಪರಿಗಣಿಸುವ ತನ್ನ ಅಂಥ ಪ್ರಕಾರ್ಯಗಳನ್ನು ನಿಹಿತಗೊಳಿಸಬಹುದು.

(4) ಪರಿಷತ್ತಿನ ಎಲ್ಲ ನಡವಳಿಗಳನ್ನು ಸದಸ್ಯ ಕಾರ್ಯದರ್ಶಿಯು ದೃಢೀಕರಿಸತಕ್ಕದ್ದು.

## ಅಧ್ಯಾಯ–III

## ಪ್ರವಾಸೋದ್ಯಮ ವ್ಯಾಪಾರಿ ಸಂಬಂಧಿ ಕಾರ್ಯಚಟುವಟಿಕೆಗಳ ನೋಂದಣಿ, ಮಾನ್ಯತೆ ಮತ್ತು ಶ್ರೇಣೀಕರಣ

**8. ನೋಂದಣಿ, ಮಾನ್ಯತೆ ಮತ್ತು ಶ್ರೇಣೀಕರಣ.–** (1) ಈ ಅಧಿನಿಯಮದ ಅಡಿಯಲ್ಲಿ ಕಾಲಕಾಲಕ್ಕೆ ರಚಿಸಿದ ನಿಯಮಗಳಲ್ಲಿ ರೂಪಿಸಲಾದ ಪ್ರಕ್ರಿಯೆಗಳಿಗನುಸಾರವಾಗಿ ಪ್ರವಾಸಿ ತಾಣಗಳಲ್ಲಿಯ ಪ್ರತಿಯೊಂದು ಪ್ರವರ್ಗದ ಪ್ರವಾಸೋದ್ಯಮ ವ್ಯಾಪಾರವನ್ನು ನೋಂದಾಯಿಸತಕ್ಕದ್ದು, ಮಾನ್ಯತೆಯನ್ನು ನೀಡತಕ್ಕದ್ದು ಹಾಗೂ ಶ್ರೇಣೀಕರಿಸತಕ್ಕದ್ದು.

(2) (1)ನೇ ಉಪಪ್ರಕರಣದಲ್ಲಿ ಹೊರಡಿಸಲಾದ ನಿಯಮಗಳು, ವಿಶೇಷವಾಗಿ ಈ ಮುಂದಿನವುಗಳಿಗಾಗಿ, ಎಂದರೆ:–

(ಎ) ಈ ಅಧಿನಿಯಮದ ಅಡಿಯಲ್ಲಿ ನೋಂದಾಯಿಸಬೇಕೆಂದು ಉದ್ದೇಶಿಸಲಾದ ಪ್ರವಾಸೋದ್ಯಮ ವ್ಯಾಪಾರದ ಗುಣಮಟ್ಟ ಮತ್ತು ಮಾನಕಗಳಿಗೆ ಸಂಬಂಧಿಸಿದ;

(ಬಿ) ನೋಂದಣಿ, ಮಾನ್ಯತೆ, ನವೀಕರಣ ಮತ್ತು ಶ್ರೇಣೀಕರಣಕ್ಕಾಗಿ ವಾರ್ಷಿಕ ಅಥವಾ ಇತರ ನಿಯತಕಾಲಿಕ ಶುಲ್ಕಗಳನ್ನು ವಿಧಿಸುವುದಕ್ಕಾಗಿ;

(ಸಿ) ನೋಂದಣಿ ಪ್ರಮಾಣ ಪತ್ರಗಳನ್ನು ನೀಡುವುದಕ್ಕಾಗಿ ಮತ್ತು ಪ್ರದರ್ಶಿಸುವುದಕ್ಕಾಗಿ ಹಾಗೂ ಪ್ರವಾಸೋದ್ಯಮ ವ್ಯಾಪಾರವು ನೋಂದಣಿಯಾಗಿದೆಯೆಂದು ತೋರಿಸುವ ಚಿಹ್ನೆಗಳನ್ನು ಪ್ರದರ್ಶಿಸುವುದಕ್ಕಾಗಿ;

(ಡಿ) ಪ್ರವಾಸೋದ್ಯಮ ವ್ಯಾಪಾರದ ತಪಾಸಣೆಗಾಗಿ ಹಾಗೂ ಆ ಉದ್ದೇಶಕ್ಕಾಗಿ ಪ್ರವೇಶಾಧಿಕಾರಗಳಿಗಾಗಿ;

(ಇ) ವರ್ಗೀಕರಣ ಅಥವಾ ಶ್ರೇಣೀಕರಣವನ್ನು ನಡೆಸಲು ಅನ್ವಯವಾಗುವ ಮಾನದಂಡವನ್ನು ಅಗತ್ಯಪಡಿಸುವುದಕ್ಕಾಗಿ;

(ಎಫ್) ಹಾಗೆ ನಿರ್ಧರಿಸಲಾದ ಯಾವುದೇ ಮಾನದಂಡದ ಪ್ರಕಟಣೆಗಾಗಿ;

(ಜಿ) ನಿಯಮಗಳ ಅಡಿಯಲ್ಲಿ ನಿರ್ವಹಿಸಬೇಕಾದ ರಿಜಿಸ್ಟರು ಅಥವಾ ರಿಜಿಸ್ಟರುಗಳ ನಮೂನೆ ಮತ್ತು ಒಳಾಂಶಗಳ ಹಾಗೂ ಅದರಲ್ಲಿ ನೋಂದಣಿಯಾಗಬೇಕಾದ ಪ್ರವಾಸೋದ್ಯಮ ವ್ಯಾಪಾರದ ಸಂಬಂಧವಾಗಿ;

(ಎಚ್) ನೋಂದಣಿಯಾದ ಅಥವಾ ಶ್ರೇಣೀಕೃತ ಪ್ರವಾಸೋದ್ಯಮ ವ್ಯಾಪಾರಕ್ಕೆ ದೊರಕುವ ಪ್ರಯೋಜನಗಳು ಅಥವಾ ಪ್ರೋತ್ಸಾಹ ಧನಗಳಿಗೆ ಸಂಬಂಧಿಸಿದ; ಮತ್ತು

(ಐ) ಸರ್ಕಾರಕ್ಕೆ ಅಗತ್ಯ ಮತ್ತು ಯುಕ್ತವೆಂದು ಕಂಡುಬರಬಹುದಾದ ಅಂಥ ಇತರ ಪೂರಕ ಮತ್ತು ಅನುಷಂಗಿಕ ವಿಷಯಗಳಿಗಾಗಿ,

– ಉಪಬಂಧವನ್ನು ಕಲ್ಪಿಸಬಹುದು.

(3) ಈ ಅಧಿನಿಯಮದ ಅಡಿಯಲ್ಲಿ ಯಾವ ಪ್ರವಾಸಿ ತಾಣಕ್ಕೆ ಸಂಬಂದಿಸಿದಂತೆ ನಿಯಮಗಳನ್ನು ರಚಿಸಲಾಗಿದೆಯೋ ಮತ್ತು ಯಾವ ಪ್ರವಾಸೋದ್ಯಮವನ್ನು ನಿಯಂತ್ರಿಸಲಾಗುತ್ತಿದೆಯೋ, ಆ ಪ್ರವಾಸಿ ತಾಣದಲ್ಲಿ, ಅಂಥ ಪ್ರವಾಸೊದ್ಯಮ ವ್ಯಾಪಾರವನ್ನು ಯಾವೊಬ್ಬ ವ್ಯಕ್ತಿಯು, ಅಂಥ ಪ್ರವಾಸೋದ್ಯಮ ವ್ಯಾಪಾರದ ಪ್ರವರ್ಗವನ್ನು ನೋಂದಾಯಿಸಿದ ಮಾನ್ಯತೆಯನ್ನು ನೀಡಿದ ಅಥವಾ ಶ್ರೇಣೀಕರಿಸಿದ ಹೊರತು ನಡೆಸತಕ್ಕದ್ದಲ್ಲ ಅಥವಾ ನಿರ್ವಹಿಸತಕ್ಕದ್ದಲ್ಲ:

ಪರಂತು, ಅಂಥ ಪ್ರವರ್ಗದ ವ್ಯಾಪಾರವನ್ನು ನಿಯಂತ್ರಿಸುವ ನಿಯಮಗಳು ಪ್ರಾರಂಭವಾದ ದಿನಾಂಕದಂದು ಪ್ರವಾಸೋದ್ಯಮ ವ್ಯಾಪಾರದ ಯಾವುದೇ ಪ್ರವರ್ಗವನ್ನು ನಡೆಸುತ್ತಿರುವ ಯಾವೊಬ್ಬ ವ್ಯಕ್ತಿಯು ಈ ಅಧಿನಿಯಮದ ಅಡಿಯಲ್ಲಿ ನೋಂದಣಿ, ಮಾನ್ಯತೆ ಅಥವಾ ಶ್ರೇಣೀಕರಣಕ್ಕಾಗಿ ಅರ್ಜಿಯನ್ನು ಸಲ್ಲಿಸಿದ್ದಲ್ಲಿ ಅದು ತಿರಸ್ಕೃತಗೊಂಡ ಹೊರತು, ಆತನು ಅಂಥ ವ್ಯಾಪಾರವನ್ನು ನಡೆಸುವುದನ್ನು ಮುಂದುವರೆಸಬಹುದು:

ಮತ್ತು ಪರಂತು, ಪ್ರವಾಸೋದ್ಯಮ ವ್ಯಾಪಾರವನ್ನು ಭಾರತ ಸರ್ಕಾರವು ನೋಂದಾಯಿಸಿರುವಲ್ಲಿ, ಅಂಥ ಪ್ರವಾಸೋದ್ಯಮ ವ್ಯಾಪಾರಕ್ಕೆ ಈ ಅಧಿನಿಯಮದ ಅಡಿಯಲ್ಲಿ ನೋಂದಣಿ ಮತ್ತು ಶ್ರೇಣೀಕರಣದಿಂದ ವಿನಾಯಿತಿ ನೀಡಬಹುದು. ಅಂಥ ಸೌಲಭ್ಯವುಳ್ಳ ಪ್ರವಾಸೋದ್ಯಮ ಆಯೋಜಕನು, ಭಾರತ ಸರ್ಕಾರವು ನೀಡಿದ ನೋಂದಣಿ ಅಥವಾ ಸಂದರ್ಭಾನುಸಾರವಾಗಿ ಶ್ರೇಣೀಕರಣದ ಪ್ರಮಾಣ ಪತ್ರದ ಪ್ರತಿಯನ್ನು ಪ್ರವಾಸೋದ್ಯಮ ಇಲಾಖೆಗೆ ಒದಗಿಸತಕ್ಕದ್ದು. ಅಂಥ ಪ್ರಮಾಣ ಪತ್ರವನ್ನು ಪರಿಶೀಲಿಸಿದ ಮೇಲೆ, ಪ್ರವಾಸೋದ್ಯಮ ಇಲಾಖೆಯು, ಅಂಥ ಪ್ರವಾಸೋದ್ಯಮ ವ್ಯಾಪಾರಕ್ಕೆ ಈ ಅಧಿನಿಯಮದ ಅಡಿಯಲ್ಲಿ ನೋಂದಣಿ ಅಥವಾ ಶ್ರೇಣೀಕರಣದಿಂದ ವಿನಾಯಿತಿ ನೀಡಬಹುದು.

(4) ಈ ಅಧಿನಿಯಮವು ಪ್ರಾರಂಭವಾದ ದಿನಾಂಕದಿಂದ ಒಂದು ವರ್ಷ ಕಳೆದ ತರುವಾಯ, ಯಾವುದೇ ಪ್ರವಾಸೋದ್ಯಮ ಸೌಲಭ್ಯಕ್ಕೆ ಸಂಬಂಧಿಸಿದಂತೆ ಯಾವೊಬ್ಬ ವ್ಯಕ್ತಿಯು (3)ನೇ ಉಪಪ್ರಕರಣವನ್ನು ಉಲ್ಲಂಘಿಸಿದನೆಂದು ಕಂಡುಬಂದರೆ, ಅಪರಾಧದ ತಪ್ಪಿತಸ್ಥನಾಗತಕ್ಕದ್ದು ಮತ್ತು ಅಪರಾಧ ನಿರ್ಣಯವಾದ ನಂತರ ಹತ್ತು ಸಾವಿರ ರೂಪಾಯಿಗಳಿಗೆ ಮೀರದ ಜುಲ್ಮಾನೆಗೆ ಗುರಿಯಾಗತಕ್ಕದ್ದು.

(5) ಯಾವೊಬ್ಬ ವ್ಯಕ್ತಿಯು, (4)ನೇ ಉಪಪ್ರಕರಣದ ಅಡಿಯಲ್ಲಿ ದಂಡನೆಗಳನ್ನು ವಿಧಿಸಿದ ತರುವಾಯವೂ ಸಹ (3)ನೇ ಉಪಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸುವುದನ್ನು ಮುಂದುವರೆಸಿದಲ್ಲಿ ಅಪರಾಧ ನಿರ್ಣಯವಾದ ನಂತರ, ಆತನು ಎರಡು ತಿಂಗಳುಗಳವರೆಗೆ ವಿಸ್ತರಿಸಬಹುದಾದ ಸಾದಾ ಕಾರಾವಾಸದಿಂದ ಅಥವಾ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

**9. ಪ್ರವಾಸೋದ್ಯಮ ವ್ಯಾಪಾರದ ನೋಂದಣಿ, ಮಾನ್ಯತೆ ಮತ್ತು ಶ್ರೇಣೀಕರಣಕ್ಕಾಗಿ ಅರ್ಜಿ.–** ಪ್ರವಾಸಿ ತಾಣದಲ್ಲಿ ಯಾವುದೇ ಪ್ರವರ್ಗದ ಪ್ರವಾಸೋದ್ಯಮ ವ್ಯಾಪಾರವನ್ನು ನಿರ್ವಹಿಸುತ್ತಿರುವ ಅಥವಾ ನಡೆಸುತ್ತಿರುವ ಅಥವಾ ನಿರ್ವಹಿಸಲು ಅಥವಾ ನಡೆಸಲು ಉದ್ದೇಶಿಸಿದ ಪ್ರವಾಸೋದ್ಯಮ ಆಯೋಜಕನು, ಅಂಥ ಪ್ರವರ್ಗದ ಪ್ರವಾಸೋದ್ಯಮ ವ್ಯಾಪಾರಕ್ಕೆ ಸಂಬಂಧಿಸಿದ ನಿಯಮಗಳು ಪ್ರಾರಂಭವಾದ ದಿನಾಂಕದಿಂದ ಆರು ತಿಂಗಳುಗಳೊಳಗೆ, ನಿಯಮಿಸಬಹುದಾದ ಅಂಥ ವಿಧಾನದಲ್ಲಿ ಮತ್ತು ಅಂಥ ನಮೂನೆಯಲ್ಲಿ ಹಾಗೂ ಅಂಥ ಶುಲ್ಕದೊಂದಿಗೆ, ನಿಯಮಿಸಲಾದ ಪ್ರಾಧಿಕಾರಕ್ಕೆ, ಪ್ರವಾಸೋದ್ಯಮ ವ್ಯಾಪಾರದ ನೋಂದಣಿ, ಮಾನ್ಯತೆ ಮತ್ತು ಶ್ರೇಣೀಕರಣಕ್ಕಾಗಿ ಅರ್ಜಿಯನ್ನು ಸಲ್ಲಿಸತಕ್ಕದ್ದು.

**10. ಪ್ರವಾಸೋದ್ಯಮ ವ್ಯಾಪಾರದ ನೋಂದಣಿ, ಮಾನ್ಯತೆ ಮತ್ತು ಶ್ರೇಣೀಕರಣಕ್ಕಾಗಿ ಪ್ರಕ್ರಿಯೆ.–** (1) ಯಾವುದೇ ಪ್ರವಾಸೋದ್ಯಮ ವ್ಯಾಪಾರದ ನೋಂದಣಿ, ಮಾನ್ಯತೆ ಮತ್ತು/ಅಥವಾ ಶ್ರೇಣೀಕರಣಕ್ಕಾಗಿ ಅರ್ಜಿಯನ್ನು ಸ್ವೀಕರಿಸಿದ ನಂತರ, ನಿಯಮಿಸಿದ ಪ್ರಾಧಿಕಾರವು, (3)ನೇ ಉಪಪ್ರಕರಣದ ಅಡಿಯಲ್ಲಿ ಪರಿಶೀಲನೆ ಮಾಡತಕ್ಕದ್ದು ಮತ್ತು ಅಂಥ ನೋಂದಣಿ, ಮಾನ್ಯತೆ ಮತ್ತು ಸಂದರ್ಭಾನುಸಾರವಾಗಿ ಶ್ರೇಣೀಕರಣದ ಅಗತ್ಯಗಳನ್ನು ಪಾಲಿಸಲಾಗಿದೆಯೆಂದು ಅದು ಅಭಿಪ್ರಾಯಪಟ್ಟರೆ, ಅಂಥ ಪ್ರವಾಸೋದ್ಯಮ ವ್ಯಾಪಾರವನ್ನು ನೋಂದಾಯಿಸತಕ್ಕದ್ದು ಮಾನ್ಯತೆಯನ್ನು ನೀಡತಕ್ಕದ್ದು ಮತ್ತು ಶ್ರೇಣೀಕರಿಸತಕ್ಕದ್ದು. ನಿಯಮಗಳನ್ನು ಪಾಲಿಸಲಾಗಿಲ್ಲವೆಂದು ನಿಯಮಿಸಿದ ಪ್ರಾಧಿಕಾರವು ಅಭಿಪ್ರಾಯಪಟ್ಟರೆ, ಅದು, ಪ್ರವಾಸೋದ್ಯಮ ವ್ಯಾಪಾರದ ನೋಂದಣಿಯನ್ನು, ಮಾನ್ಯತೆಯನ್ನು ಮತ್ತು ಶ್ರೇಣೀಕರಣವನ್ನು ದಾಖಲಿಸಬೇಕಾದ ಕಾರಣಗಳಿಗಾಗಿ ತಿರಸ್ಕರಿಸಬಹುದು.

(2) ಪ್ರವಾಸೋದ್ಯಮ ವ್ಯಾಪಾರದ ನೋಂದಣಿ, ಮಾನ್ಯತೆ ಮತ್ತು ಶ್ರೇಣೀಕರಣಕ್ಕಾಗಿನ ಅರ್ಜಿಯನ್ನು ನಿಯಮಿಸಿದ ಪ್ರಾಧಿಕಾರವು ಅಂಥ ಅರ್ಜಿಯನ್ನು ಸ್ವೀಕರಿಸಿದ ದಿನಾಂಕದ ತರುವಾಯದ ತೊಂಬತ್ತು ದಿನಗಳೊಳಗಾಗಿ ಪರಿಶೀಲಿಸತಕ್ಕದ್ದು.

(3) ಪ್ರವಾಸೋದ್ಯಮ ವ್ಯಾಪಾರದ ನೋಂದಣಿ, ಮಾನ್ಯತೆ ಅಥವಾ ಶ್ರೇಣೀಕರಣಕ್ಕೆ ಮೊದಲು, ನಿಯಮಿಸಿದ ಪ್ರಾಧಿಕಾರವು,–

(ಎ) ಪ್ರವಾಸೋದ್ಯಮ ವ್ಯಾಪಾರವನ್ನು ಪರೀಕ್ಷಿಸತಕ್ಕದ್ದು ಅಥವಾ ಪ್ರಾಧಿಕೃತ ಅಧಿಕಾರಿ ಅಥವಾ

ಸರ್ಕಾರಿ ಏಜೆನ್ಸಿಯ ಮೂಲಕ ಪರೀಕ್ಷಿಸುವಂತೆ ಮಾಡತಕ್ಕದ್ದು;

(ಬಿ) ನೋಂದಣಿ, ಮಾನ್ಯತೆ ಅಥವಾ ಶ್ರೇಣೀಕರಣದ ಮೇಲೆ ತೀರ್ಮಾನ ಕೈಗೊಳ್ಳಲು ಅವರಿಗೆ ಸಹಕಾರಿಯಾಗುವ ಉದ್ದೇಶಕ್ಕಾಗಿ ನೇಮಿಸಲಾದ ಯಾವೊಬ್ಬ ಪ್ರಾಧಿಕೃತ ಅಧಿಕಾರಿ ಅಥವಾ ಸರ್ಕಾರಿ ಏಜೆನ್ಸಿಯಿಂದ ಒಂದು ವರದಿಯನ್ನು ಕೋರಬಹುದು;

(ಸಿ) ಅದು ಅವಶ್ಯಕವೆಂದು ಪರಿಗಣಿಸಿದಂತೆ ಅದಕ್ಕೆ ಸಂಬಂಧಿಸಿದ ಅಂಥ ಹೆಚ್ಚಿನ ತನಿಖೆಗಳನ್ನು ನಡೆಸಬಹುದು ಅಥವಾ ನಡೆಸುವಂತೆ ಮಾಡಬಹುದು.

(4) ಪ್ರವಾಸೋದ್ಯಮ ವ್ಯಾಪಾರದ ನೋಂದಣಿ, ಮಾನ್ಯತೆ ಅಥವಾ ಶ್ರೇಣೀಕರಣವಾದ ನಂತರ, ನಿಯಮಿಸಿದ ಪ್ರಾಧಿಕಾರವು, ಪ್ರವಾಸೋದ್ಯಮ ವ್ಯಾಪಾರಕ್ಕೆ ನಿಯಮಿಸಲಾದ ನಮೂನೆಯಲ್ಲಿ ಒಂದು ಪ್ರಮಾಣ ಪತ್ರವನ್ನು ನೀಡತಕ್ಕದ್ದು.

**11. ನೋಂದಣಿ ದಾಖಲೆಗಳನ್ನು ನಿರ್ವಹಿಸುವುದು.**–(1) 8ನೇ ಪ್ರಕರಣದ (1)ನೇ ಉಪಪ್ರಕರಣದ ಅಡಿಯಲ್ಲಿ ಪ್ರವಾಸೋದ್ಯಮ ವ್ಯಾಪಾರದ ಯಾವುದೇ ವರ್ಗದ ನೋಂದಣಿ, ಮಾನ್ಯತೆ ಮತ್ತು ಶ್ರೇಣೀಕರಣಕ್ಕೆ ಅಗತ್ಯವಿರುವ ಯಾವುವೇ ನಿಯಮಗಳನ್ನು ಪ್ರಕಟಿಸುವ ಮೊದಲು ಅಥವಾ ಆ ತರುವಾಯ ಸಾಧ್ಯವಾದಷ್ಟು ಬೇಗನೆ, ಈ ಅಧಿನಿಯಮದ ಅಡಿಯಲ್ಲಿ ನೋಂದಾಯಿಸಿದ, ಮಾನ್ಯತೆಯನ್ನು ನೀಡಿದ ಮತ್ತು ಶ್ರೇಣೀಕರಿಸಿದ ಪ್ರವಾಸೋದ್ಯಮ ವ್ಯಾಪಾರದ ದಾಖಲೆಗಳನ್ನು ನಿರ್ವಹಿಸುವುದಕ್ಕಾಗಿ ಪ್ರವಾಸೋದ್ಯಮ ಇಲಾಖೆಯ ಒಂದು ಕೋಶವನ್ನು ಸ್ಥಾಪಿಸತಕ್ಕದ್ದು.

(2) ಪ್ರವಾಸೋದ್ಯಮ ಇಲಾಖೆಯೂ ಸಹ ದಾಖಲೆಗಳನ್ನು ನಿರ್ವಹಿಸತಕ್ಕದ್ದು ಮತ್ತು ಭಾರತ ಸರ್ಕಾರದಿಂದ ನೋಂದಾಯಿತವಾದ, ಮಾನ್ಯತೆಯನ್ನು ನೀಡಿದ ಮತ್ತು/ಅಥವಾ ಶ್ರೇಣೀಕೃತವಾದ ಪ್ರವಾಸೋದ್ಯಮ ವ್ಯಾಪಾರವನ್ನು ಕಾಲಕಾಲಕ್ಕೆ ಅಧಿಸೂಚಿಸತಕ್ಕದ್ದು.

**12. ನೋಂದಾಯಿಸಿದ ಅಥವಾ ಮಾನ್ಯತೆಯನ್ನು ನೀಡಿದ ಪ್ರವಾಸೋದ್ಯಮ ವ್ಯಾಪಾರವನ್ನು ಪ್ರಕಟಿಸುವುದು.**– ಪ್ರವಾಸೋದ್ಯಮ ಇಲಾಖೆಯು, ವರ್ಷಕ್ಕೊಮ್ಮೆ ಅಥವಾ ಸರ್ಕಾರವು ನಿರ್ದೇಶಿಸಬಹುದಾದ ಇತರ ಅಂಥ ಅವಧಿಯ ಅಂತರಗಳಲ್ಲಿ, ಸೌಲಭ್ಯಗಳ ದರ್ಜೆಗಳು ಮತ್ತು ಗುಣಮಟ್ಟಗಳಿಗೆ ಹಾಗೂ ಪ್ರವಾಸಿಗಳ ಹಿತಾಸಕ್ತಿಗಾಗಿ ಯಾವುದೇ ಇತರ ವಿಷಯಕ್ಕೆ ಸಂಬಂಧಿಸಿದಂತೆ ಅದು ಸೂಕ್ತವೆಂದು ಯೋಚಿಸಿದ ಅಂಥ ಮಾಹಿತಿಯ ಜೊತೆಗೆ ನೋಂದಾಯಿಸಿದ ಮತ್ತು ಮಾನ್ಯತೆಯನ್ನು ನೀಡಲಾದ ಪ್ರವಾಸೋದ್ಯಮ ವ್ಯಾಪಾರದ ಒಂದು ಪಟ್ಟಿಯನ್ನು ಪ್ರಕಟಿಸತಕ್ಕದ್ದು.

**13. ನೋಂದಣಿ ಮತ್ತು ಮಾನ್ಯತೆಯನ್ನು ರದ್ದುಪಡಿಸುವುದು.**– (1) ನೋಂದಣಿ, ಮಾನ್ಯತೆ ಅಥವಾ ಶ್ರೇಣೀಕರಣಕ್ಕೆ ಸಂಬಂಧಿಸಿದಂತೆ ನಿಯಮಿಸಲಾದ ಯಾವುದೇ ಷರತ್ತುಗಳು ಮತ್ತು ಅಗತ್ಯಗಳನ್ನು ಪಾಲಿಸಲು ನೋಂದಾಯಿತ ಮತ್ತು ಮಾನ್ಯತೆಯನ್ನು ಪಡೆದ ಪ್ರವಾಸೋದ್ಯಮ ವ್ಯಾಪಾರವು ವಿಫಲವಾಗಿದೆಯೆಂದು ನಿಯಮಿಸಿದ ಪ್ರಾಧಿಕಾರದ ಗಮನಕ್ಕೆ ಬಂದರೆ ಮತ್ತು ಅದು ಹಾಗೆ ಪರಿಗಣಿಸಿದರೆ, ನಿಯಮಿಸಿದ ಪ್ರಾಧಿಕಾರವು ಅಂಥ ಪ್ರವಾಸೋದ್ಯಮ ವ್ಯಾಪಾರದ ಪ್ರವಾಸಿ ಆಯೋಜಕನಿಗೆ ಒಂದು ನೋಟೀಸನ್ನು, ಅಂಥ ನೋಟೀಸು ನೀಡಿದ ಮೂವತ್ತು ದಿನಗಳನ್ನು ಮೀರದ ಅವಧಿಯೊಳಗಾಗಿ ಷರತ್ತುಗಳು ಅಥವಾ ಅಗತ್ಯತೆಗಳನ್ನು ಪಾಲಿಸುವಂತೆ ಆತನನ್ನು ಅಗತ್ಯಪಡಿಸಿ, ನೀಡಬಹುದು, ಅದಕ್ಕೆ ತಪ್ಪಿದಲ್ಲಿ, ನೋಂದಣಿ, ಮಾನ್ಯತೆ ಅಥವಾ ಶ್ರೇಣೀಕರಣದ ರದ್ದತಿಗೆ ಹೊಣೆಗಾರನನ್ನಾಗಿ ಮಾಡತಕ್ಕದ್ದು.

(2) (1)ನೇ ಉಪಪ್ರಕರಣದ ಅಡಿಯಲ್ಲಿ ನೋಟೀಸು ನೀಡಲಾದ ನೋಂದಾಯಿತ ಮತ್ತು ಮಾನ್ಯತೆಯನ್ನು ಪಡೆದ ಪ್ರವಾಸೋದ್ಯಮ ವ್ಯಾಪಾರದ ಪ್ರವಾಸಿ ಆಯೋಜಕನು, ನೋಟೀಸಿನಲ್ಲಿ ನಿರ್ದಿಷ್ಟಪಡಿಸಿದ ಅವಧಿಯು ಕೊನೆಗೊಳ್ಳುವ ಮೊದಲು, ನಿಯಮಿಸಿದ ಪ್ರಾಧಿಕಾರಕ್ಕೆ ನೋಂದಣಿ ಮತ್ತು ಮಾನ್ಯತೆಯನ್ನು ಮುಂದುವರಿಸುವ ಬಗ್ಗೆ ಕಾರಣಗಳನ್ನು ನೀಡಿ ಲಿಖಿತದಲ್ಲಿ ಉತ್ತರವನ್ನು ಸಲ್ಲಿಸತಕ್ಕದ್ದು.

(3) (1)ನೇ ಉಪಪ್ರಕರಣದ ನಿಬಂಧನೆಗಳಿಗನುಸಾರವಾಗಿ ನೀಡಲಾದ ನೋಟೀಸಿನಲ್ಲಿ ನಿರ್ದಿಷ್ಟಪಡಿಸಿದ ಅವಧಿಯು ಕೊನೆಗೊಂಡ ನಂತರ, ಷರತ್ತು ಅಥವಾ ಅಗತ್ಯವನ್ನು ಪಾಲಿಸಲಾಗಿಲ್ಲವೆಂದು ಹಾಗೂ ಸಂಬಂಧಪಟ್ಟ ಪ್ರವಾಸೋದ್ಯಮ ವ್ಯಾಪಾರವನ್ನು ನೋಂದಾಯಿಸಿದ್ದನ್ನು ಮತ್ತು ಮಾನ್ಯತೆಯನ್ನು ಏಕೆ ಉಳಿಸಿಕೊಳ್ಳಬೇಕು ಎಂಬುದಕ್ಕೆ ಸೂಕ್ತ ಕಾರಣವನ್ನು ತೋರಿಸಿಲ್ಲವೆಂದು ನಿಯಮಿಸಲಾದ ಪ್ರಾಧಿಕಾರವು ಪರಿಗಣಿಸಿದರೆ, ಅದು ಪ್ರವಾಸೋದ್ಯಮ ವ್ಯಾಪಾರದ ನೋಂದಣಿ ಮತ್ತು ಮಾನ್ಯತೆಯನ್ನು ರದ್ದುಪಡಿಸಬಹುದು ಹಾಗೂ ಪ್ರವಾಸೋದ್ಯಮ ಆಯೋಜಕನಿಗೆ ರದ್ದತಿ ನೋಟೀಸನ್ನು ನೀಡಬಹುದು.

**14. ಮರು ಶ್ರೇಣೀಕರಣ.**– (1) ನಿಯಮಿಸಿದ ಪ್ರಾಧಿಕಾರವು ಯಾವುದೇ ಸಮಯದಲ್ಲಿ, ಅದು ಅಥವಾ ಯಾವುದೇ ಪ್ರಾಧಿಕೃತ ಅಧಿಕಾರಿಯು ಮಾಡಿದ ಪರೀಕ್ಷೆಯ ನಂತರ, ಆ ವಿಷಯದಲ್ಲಿ ಪ್ರವಾಸೋದ್ಯಮ ಆಯೋಜಕನಿಗೆ ಲಿಖಿತದಲ್ಲಿ ಮನವಿಗಳನ್ನು ಸಲ್ಲಿಸಲು ಯುಕ್ತ ಅವಕಾಶವನ್ನು ನೀಡಿದ ತರುವಾಯ, ಅದರ ಅಭಿಪ್ರಾಯದಲ್ಲಿ ಪ್ರವಾಸೋದ್ಯಮ ವ್ಯಾಪಾರವನ್ನು ಮರು ಶ್ರೇಣೀಕರಿಸಲು ಸೂಕ್ತ ಮತ್ತು ಸಾಕಷ್ಟು ಕಾರಣಗಳಿದ್ದರೆ ಅದು ಹಾಗೆ ಮಾಡಬಹುದು.

(2) ಶ್ರೇಣೀಕರಣಗೊಂಡ ಪ್ರವಾಸೋದ್ಯಮ ವ್ಯಾಪಾರದ ಪ್ರವಾಸೋದ್ಯಮ ಆಯೋಜಕನು, ನಿಯಮಿಸಬಹುದಾದ ಅಂಥ ಷರತ್ತುಗಳಿಗೊಳಪಟ್ಟು ಮತ್ತು ಅಂಥ ಶುಲ್ಕದ ಜೊತೆಗೆ ನಿಯಮಿಸಿದ ಪ್ರಾಧಿಕಾರಕ್ಕೆ, ನಿಯಮಿಸಲಾದ ನಮೂನೆ ಮತ್ತು ವಿಧಾನದಲ್ಲಿ ಪ್ರವಾಸೋದ್ಯಮ ವ್ಯಾಪಾರದ ಮರು ಶ್ರೇಣೀಕರಣಕ್ಕಾಗಿ ಅರ್ಜಿಯನ್ನು ಸಲ್ಲಿಸಬಹುದು.

(3) ನಿಯಮಿಸಿದ ಪ್ರಾಧಿಕಾರವು, (2)ನೇ ಉಪಪ್ರಕರಣದ ಅಡಿಯಲ್ಲಿ ಸಲ್ಲಿಸಿದ ಯಾವುದೇ ಅರ್ಜಿಯನ್ನು ಪರಿಗಣಿಸತಕ್ಕದ್ದು ಮತ್ತು ಅದರ ನಿರ್ಧಾರವನ್ನು ನೀಡತಕ್ಕದ್ದು ಹಾಗೂ ತಾನು ಸಮರ್ಪಕವೆಂದು ಪರಿಗಣಿಸುವ ಕ್ರಮವನ್ನು ತೆಗೆದುಕೊಳ್ಳತಕ್ಕದ್ದು.

**15. ನೋಂದಣಿ ಮತ್ತು ಶ್ರೇಣೀಕರಣದ ನವೀಕರಣ.**– ಈ ಅಧಿನಿಯಮದ ಅಡಿಯಲ್ಲಿ ಯಾವುದೇ ಪ್ರವಾಸೋದ್ಯಮ ವ್ಯಾಪಾರಕ್ಕೆ ಸಂಬಂಧಿಸಿದಂತೆ ಪಡೆಯಲಾದ ನೋಂದಣಿ ಮತ್ತು/ಅಥವಾ ಶ್ರೇಣೀಕರಣ ಪ್ರಮಾಣ ಪತ್ರವನ್ನು ಐದು ವರ್ಷಗಳಿಗೊಮ್ಮೆ, ಅಂಥ ಪ್ರವಾಸೋದ್ಯಮ ವ್ಯಾಪಾರದ ಸಂಬಂಧದಲ್ಲಿ ಹೊರಡಿಸಲಾದ ನಿಯಮಗಳಲ್ಲಿ ನಿಯಮಿಸಬಹುದಾದ ಅಂಥ ಶುಲ್ಕದೊಂದಿಗೆ ಅಂಥ ವಿಧಾನದಲ್ಲಿ ನವೀಕರಿಸತಕ್ಕದ್ದು.

## ಅಧ್ಯಾಯ–IV

## ಲೈಸೆನ್ಸ್ ನೀಡುವುದು

**16. ಪ್ರವಾಸಿ ಮಾರ್ಗದರ್ಶಿಗಳ ಲೈಸೆನ್ಸ್.**– (1) ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ನಿಯಮಗಳಲ್ಲಿ ನಿರೂಪಿಸಿದ ಪ್ರಕ್ರಿಯೆಗೆ ಅನುಸಾರವಾಗಿ ಪ್ರವಾಸಿ ಮಾರ್ಗದರ್ಶಿಗಳಿಗೆ ನಿಯಮಿಸಿದ ಪ್ರಾಧಿಕಾರವು ಲೈಸೆನ್ಸನ್ನು ನೀಡತಕ್ಕದ್ದು. ನಿಯಮಗಳು ಪ್ರವಾಸಿ ಮಾರ್ಗದರ್ಶಿಗಳ ಆಯ್ಕೆಗಾಗಿ ಶೈಕ್ಷಣಿಕ ವಿದ್ಯಾರ್ಹತೆ, ಪಠ್ಯಕ್ರಮ, ತರಬೇತಿ ಮತ್ತು ಕಾರ್ಯವಿಧಾನವನ್ನೂ ಸಹ ನಿಯಮಿಸತಕ್ಕದ್ದು.

(2) ಪ್ರವಾಸಿ ತಾಣದಲ್ಲಿ ನೀಡಬೇಕಾದ ಪ್ರವಾಸಿ ಮಾರ್ಗದರ್ಶಿ ಲೈಸೆನ್ಸುಗಳ ಸಂಖ್ಯೆಯನ್ನು ನಿಯಮಿಸಿದ ಪ್ರಾಧಿಕಾರವು ನಿಯಂತ್ರಿಸತಕ್ಕದ್ದು.

(3) (1)ನೇ ಉಪಪ್ರಕರಣದ ಅಡಿಯಲ್ಲಿ ಪ್ರವಾಸಿ ಮಾರ್ಗದರ್ಶಿ ಲೈಸೆನ್ಸುದಾರನು ನಿಯಮಿಸಲಾದ ವಿಧಾನದಲ್ಲಿ ಪ್ರದರ್ಶಿಸಬೇಕಾದ ಗುರುತಿನ ಚೀಟಿಯನ್ನು ಹೊಂದಿರತಕ್ಕದ್ದು.

(4) ಒಬ್ಬ ವ್ಯಕ್ತಿಯು,–

(ಎ) ನೋಂದಣಿಗಾಗಿ ಅರ್ಜಿ ಸಲ್ಲಿಸಿದ ದಿನಾಂಕದಿಂದ ನಿಕಟಪೂರ್ವದ ಐದು ವರ್ಷಗಳೊಳಗೆ ಯಾವುದೇ ಕ್ರಿಮಿನಲ್ ಅಪರಾಧದ ಅಪರಾಧ ನಿರ್ಣೀತನಾಗಿದ್ದರೆ; ಅಥವಾ

(ಬಿ) ಕ್ರಿಮಿನಲ್ ಆಗಿರುವ ಹಿನ್ನಲೆ ಅಥವಾ ದಾಖಲೆಗಳನ್ನು ಹೊಂದಿದ್ದರೆ; ಅಥವಾ

(ಸಿ) ಈ ಪ್ರಕರಣದ ಅಡಿಯಲ್ಲಿ ಕಲ್ಪಿಸಿದ ಅರ್ಹತೆಗಳ ವ್ಯಾಪ್ತಿಯೊಳಗೆ ಬರದಿದ್ದಲ್ಲಿ,

– ನಿಯಮಿಸಿದ ಪ್ರಾಧಿಕಾರವು, ಈ ಪ್ರಕರಣದ ಅಡಿಯಲ್ಲಿ ಆ ವ್ಯಕ್ತಿಗೆ ಪ್ರವಾಸಿ ಮಾರ್ಗದರ್ಶಿ ಲೈಸೆನ್ಸ್‌ನ್ನು ನೀಡಲು ನಿರಾಕರಿಸಬಹುದು ಹಾಗೂ ಅಂಥ ನಿರಾಕರಣೆಗೆ ಕಾರಣಗಳನ್ನು ಆ ವ್ಯಕ್ತಿಗೆ ತಿಳಿಸತಕ್ಕದ್ದು.

(5) ಈ ಅಧಿನಿಯಮದ ಅಡಿಯಲ್ಲಿ ಲೈಸೆನ್ಸ್ ಪಡೆದ ಪ್ರತಿಯೊಬ್ಬ ಪ್ರವಾಸಿ ಮಾರ್ಗದರ್ಶಿಯು,–

(ಎ) ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ನಿಯಮಗಳನ್ನು ಅನುಸರಿಸುವುದು;

(ಬಿ) ಪ್ರವಾಸಿಗರ ಮಾರ್ಗದರ್ಶನಕ್ಕೆ ಅನುಮೋದಿತ ದಾರಿ ಅಥವಾ ಕಾಲುದಾರಿಯನ್ನು ಬಳಸುವುದು; ಮತ್ತು

(ಸಿ) ಪ್ರವಾಸಿಗರು ಅಥವಾ ಭೇಟಿ ನೀಡುವವರೊಂದಿಗೆ ಸಭ್ಯವಾಗಿ, ಆತಿಥ್ಯಪೂರ್ವಕವಾಗಿ, ಸಹಾಯಕವಾಗಿ ಮತ್ತು ಸ್ನೇಹಯುತವಾಗಿ ಇರುವುದು,

– ಅಗತ್ಯವಾಗಿರತಕ್ಕದ್ದು.

(6) ಈ ಅಧಿನಿಯಮದ ಅಥವಾ ಅದರಡಿಯಲ್ಲಿ ರಚಿತವಾದ ನಿಯಮಗಳ ಯಾವುವೇ ಉಪಬಂಧಗಳನ್ನು ಉಲ್ಲಂಘಿಸುವ ಯಾವೊಬ್ಬ ಪ್ರವಾಸಿ ಮಾರ್ಗದರ್ಶಿಯ ವಿರುದ್ಧ ಯಾವೊಬ್ಬ ವ್ಯಕ್ತಿಯು ನಿಯಮಿಸಲಾದ ಪ್ರಾಧಿಕಾರಕ್ಕೆ ಲಿಖಿತದಲ್ಲಿ ದೂರನ್ನು ಸಲ್ಲಿಸಬಹುದು.

(7) ಈ ಅಧಿನಿಯಮದ ಯಾವುವೇ ಉಪಬಂಧಗಳನ್ನು ಪ್ರವಾಸಿ ಮಾರ್ಗದರ್ಶಿಯು ಉಲ್ಲಂಘಿಸಿರುವನೆಂದು ನಿಯಮಿಸಿದ ಪ್ರಾಧಿಕಾರಕ್ಕೆ ಮನವರಿಕೆಯಾದಲ್ಲಿ, ಆತನು, ಅಂಥ ಪ್ರವಾಸಿ ಮಾರ್ಗದರ್ಶಿಯ ಲೈಸೆನ್ಸ್‌ನ್ನು ಅಮಾನತುಪಡಿಸಬಹುದು ಅಥವಾ ರದ್ದುಪಡಿಸಬಹುದು.

(8) ನಿಯಮಿಸಲಾದ ಪ್ರಾಧಿಕಾರದಿಂದ ಲೈಸೆನ್ಸನ್ನು ಪಡೆಯದ ಯಾವೊಬ್ಬ ವ್ಯಕ್ತಿಯು ಪ್ರವಾಸಿ ಮಾರ್ಗದರ್ಶಿಯಾಗಿ ಕಾರ್ಯನಿರ್ವಹಿಸುತ್ತಿರುವುದು ಕಂಡುಬಂದರೆ, ಪ್ರವಾಸಿ ಮಿತ್ರ ಅಥವಾ ಪ್ರವಾಸೋದ್ಯಮ ಇಲಾಖೆಯ ಇತರ ಅಧಿಕಾರಿಯು ನಿಯಮಿಸಲಾದ ಪ್ರಾಧಿಕಾರಕ್ಕೆ ವಿಷಯವನ್ನು ವರದಿ ಮಾಡಿದ ನಂತರ, ಎರಡು ಸಾವಿರ ರೂಪಾಯಿಗಳನ್ನು ಮೀರದ ಜುಲ್ಮಾನೆಗೆ ಗುರಿಯಾಗತಕ್ಕದು. ಅಂಥ ವರದಿಯ ಆಧಾರದ ಮೇಲೆ, ನಿಯಮಿಸಲಾದ ಪ್ರಾಧಿಕಾರವು ವಿಚಾರಣೆಯನ್ನು ನಡೆಸತಕ್ಕದ್ದು ಮತ್ತು ಜುಲ್ಮಾನೆಗಾಗಿ ಆದೇಶಗಳನ್ನು ಹೊರಡಿಸುವ ಮೊದಲು ಸಂಬಂಧಪಟ್ಟ ವ್ಯಕ್ತಿಗೆ ಅಹವಾಲನ್ನು ಹೇಳಿಕೊಳ್ಳಲು ಅವಕಾಶವನ್ನು ನೀಡತಕ್ಕದ್ದು ಮತ್ತು ಜುಲ್ಮಾನೆಗೆ ಗುರಿಯಾದ ಯಾರೇ ಆಗಲೀ ಪ್ರವಾಸಿ ಮಾರ್ಗದರ್ಶಿಯಾಗಿ ಕಾರ್ಯನಿರ್ವಹಿಸುವುದನ್ನು ಪುನರಾವರ್ತಿಸುವ ಅಥವಾ ಮುಂದುವರೆಸುವ ಅಂಥ ಅಪರಾಧಕ್ಕಾಗಿ ಸಬ್–ಇನ್ಸ್‌ಪೆಕ್ಟರ್‌ನ ದರ್ಜೆಗಿಂತ ಕಡಿಮೆ ಇರದ ಯಾವೊಬ್ಬ ಪೋಲೀಸ್ ಅಧಿಕಾರಿಯು ವಾರಂಟಿಲ್ಲದೆ ದಸ್ತಗಿರಿ ಮಾಡತಕ್ಕದ್ದು.

(9) (8)ನೇ ಉಪಪ್ರಕರಣದ ಅಡಿಯಲ್ಲಿ ದಸ್ತಗಿರಿಯಾದ ಯಾವೊಬ್ಬ ವ್ಯಕ್ತಿಯನ್ನು, ಅಧಿಕಾರ ವ್ಯಾಪ್ತಿ ಹೊಂದಿರುವ ನ್ಯಾಯಿಕ ದಂಡಾಧಿಕಾರಿಯ ಮುಂದೆ ಹಾಜರುಪಡಿಸತಕ್ಕದ್ದು ಮತ್ತು ಅಂಥ ವ್ಯಕ್ತಿಯು, ಅಪರಾಧ ನಿರ್ಣಯವಾದ ಮೇಲೆ ಹದಿನೈದು ದಿನಗಳಿಗೆ ವಿಸ್ತರಿಸಬಹುದಾಗಿರುವ ಅವಧಿಗಾಗಿ ಸಾದಾ ಕಾರಾವಾಸದಿಂದ ಅಥವಾ ಎರಡು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾಗಿರುವ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

## ಅಧ್ಯಾಯ–V

## ಪ್ರವಾಸಿ ಮಿತ್ರ

**17. ಪ್ರವಾಸಿ ಮಿತ್ರ.–** (1) ಪ್ರವಾಸಿಗರಿಗೆ ಅವಶ್ಯಕ ನೆರವು ನೀಡುವುದನ್ನು ಖಚಿತಪಡಿಸಲು ಮತ್ತು ಯಾವುದೇ ರೀತಿಯ ತೊಂದರೆಯಿಂದ ಪ್ರವಾಸಿಗನನ್ನು ರಕ್ಷಿಸಲು, ಸರ್ಕಾರದ ಪೂರ್ವಾನುಮೋದನೆಯೊಂದಿಗೆ ಅದು ಕಾಲಕಾಲಕ್ಕೆ ನಿರ್ದಿಷ್ಟಪಡಿಸಬಹುದಾದ ಅಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಪ್ರವಾಸೋದ್ಯಮ ಇಲಾಖೆಯು ಪ್ರವಾಸಿ ಮಿತ್ರ ಎಂದು ಕರೆಯಲಾಗುವ ವಿಶೇಷವಾಗಿ ತರಬೇತಾದ ವೃಂದದ ಒಂದು ಗುಂಪನ್ನು ನೇಮಕ ಮಾಡತಕ್ಕದ್ದು:

ಪರಂತು, ಪ್ರವಾಸೋದ್ಯಮ ಇಲಾಖೆಯು ಅಧಿಸೂಚನೆಯ ಮೂಲಕ ಪ್ರವಾಸಿತಾಣದ ನಿರ್ವಹಣೆಯ ಪ್ರಭಾರದಲ್ಲಿರುವ ಪ್ರಾಧಿಕಾರ ಅಥವಾ ಸಂಸ್ಥೆಯ ಯಾವೊಬ್ಬ ನೌಕರನನ್ನು ಆ ಪ್ರಾಧಿಕಾರ ಅಥವಾ ಸಂಸ್ಥೆಯೊಂದಿಗೆ ಸಮಾಲೋಚಿಸಿ "ಪ್ರವಾಸಿ ಮಿತ್ರ" ಎಂದು ಹೆಸರಿಸಬಹುದು.

(2) ಪ್ರವಾಸಿ ಮಿತ್ರನು, ಈ ಅಧಿನಿಯಮದ ಅಡಿಯಲ್ಲಿ ಆತನಿಗೆ ವಹಿಸಲಾದ ಅಂಥ ಪ್ರಕಾರ್ಯಗಳನ್ನು ಮತ್ತು, ರಾಜ್ಯದಲ್ಲಿ ತತ್ಕಾಲದಲ್ಲಿ ಜಾರಿಯಲ್ಲಿರುವ ಕಾನೂನಿಗೆ ಅನುಸಾರವಾಗಿ ಪ್ರವಾಸೋದ್ಯಮ ಇಲಾಖೆಯ ಸಹಯೋಗ ಮತ್ತು ಸಮನ್ವಯದಲ್ಲಿ ರಾಜ್ಯ ಸರ್ಕಾರವು ಆತನಿಗೆ ವಹಿಸಬಹುದಾದ ಅಂಥ ಇತರ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು.

(3) ಪ್ರವಾಸೋದ್ಯಮ ಇಲಾಖೆಯು, ಜಿಲ್ಲೆಯ ಜಿಲ್ಲಾಧಿಕಾರಿ ಮತ್ತು ಆ ಪ್ರದೇಶದ ಪ್ರಭಾರದಲ್ಲಿರುವ ಪೋಲೀಸ್ ಸೂಪರಿಂಟೆಂಡೆಂಟ್‌ರವರೊಂದಿಗೆ ಸಮಾಲೋಚಿಸಿ ಪ್ರವಾಸೋದ್ಯಮ ತಾಣದಲ್ಲಿನ ವಿವಿಧ ಸ್ಥಳಗಳಲ್ಲಿ ಪ್ರವಾಸಿ ಮಿತ್ರನನ್ನು ನಿಯೋಜಿಸತಕ್ಕದ್ದು.

(4) ಪ್ರವಾಸೋದ್ಯಮ ತಾಣವನ್ನು ಒಳಗೊಂಡಿರುವ ಸ್ಥಳೀಯ ಪ್ರದೇಶದ ಮೇಲೆ ಅಧಿಕಾರ ವ್ಯಾಪ್ತಿ ಹೊಂದಿರುವ ಪ್ರವಾಸೋದ್ಯಮ ಇಲಾಖೆಯ ಪ್ರಭಾರಿ ಅಧಿಕಾರಿಯು, ಸಂದರ್ಭಗಳು ಉದ್ಭವಿಸಿದರೆ ಮತ್ತು ಉದ್ಭವಿಸಿದಾಗ, ಪ್ರವಾಸಿ ಮಿತ್ರನಿಗೆ ನಿರ್ದೇಶನಗಳನ್ನು ನೀಡುವ ಅಧಿಕಾರ ಹೊಂದಿರತಕ್ಕದ್ದು ಮತ್ತು ಅವನು ಈ ಅಧಿನಿಯಮದ ಅಡಿಯಲ್ಲಿ ಅಥವಾ ಅದರ ಅಡಿಯಲ್ಲಿ ರಚಿಸಲಾದ ನಿಯಮಗಳು ಮತ್ತು ವಿನಿಯಮಗಳ ಅಡಿಯಲ್ಲಿ ಅವನಿಗೆ ವಹಿಸಿದ ಪ್ರಕಾರ್ಯಗಳ ವಿಷಯಗಳಿಗೆ ಸಂಬಂಧಿಸಿದಂತೆ ಆ ನಿರ್ದೇಶನಗಳನ್ನು ಪಾಲಿಸತಕ್ಕದ್ದು.

(5) ಪ್ರವಾಸಿ ಮಿತ್ರನು, ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವುದಕ್ಕಾಗಿ ಉಪದ್ರವಕಾರಿಗಳು, ದಳ್ಳಾಳಿಗಳು, ಬೀದಿ ವ್ಯಾಪಾರಿಗಳು ಮುಂತಾದವರ ಮೇಲೆ ಗಮನ ಇರಿಸತಕ್ಕದ್ದು, ಪ್ರವಾಸಿ ಮಿತ್ರನು ಪ್ರವಾಸಿ ತಾಣಗಳಲ್ಲಿ ಗಸ್ತು ತಿರುಗತಕ್ಕದ್ದು ಮತ್ತು ಕಾನೂನುಬಾಹಿರ ಬೀದಿ ವ್ಯಾಪಾರಿಗಳು ಮತ್ತು ದಳ್ಳಾಳಿಗಳು, ಮುಂತಾದವರ ವಿರುದ್ಧ ಸೂಕ್ತ ಕ್ರಮವನ್ನು ಪ್ರಾರಂಭಿಸಲು ಅಧಿಕಾರ ವ್ಯಾಪ್ತಿ ಹೊಂದಿರುವ ಪೋಲೀಸ್ ಠಾಣೆಯಲ್ಲಿನ ಸಂಬಂಧಪಟ್ಟ ಪೋಲೀಸ್ ಅಧಿಕಾರಿಗೆ ತಿಳಿಸತಕ್ಕದ್ದು.

(6) ಪ್ರವಾಸಿ ಮಿತ್ರನು ಸರ್ಕಾರವು ನಿರ್ಧರಿಸಬಹುದಾದ ಅಂಥ ಹೆಸರಿನ ಟ್ಯಾಗನ್ನು ಮತ್ತು ಅಂಥ ಸಮವಸ್ತ್ರವನ್ನು ಮತ್ತು ಅಧಿಕಾರದ ಲಾಂಛನ ಮತ್ತು ಇತರ ಪರಿಕರಗಳನ್ನು ಧರಿಸತಕ್ಕದ್ದು ಮತ್ತು ಯುಕ್ತವಾಗಿ ಪ್ರದರ್ಶಿಸಲಾದ ಭಾವಚಿತ್ರವಿರುವ ಗುರುತು ಚೀಟಿಯನ್ನು ತಮ್ಮ ಶರೀರದ ಮೇಲೆ ದರಿಸತಕ್ಕದ್ದು.

(7) ಸರ್ಕಾರವು, ಪ್ರವಾಸಿ ಮಿತ್ರನನ್ನು ನಿಯಂತ್ರಿಸುವುದಕ್ಕಾಗಿ ಈ ಅಧಿನಿಯಮದ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನ ಉಪಬಂಧಕ್ಕೆ ಅಸಂಗತವಾಗಿರದ ನಿಯಮಗಳನ್ನು ರಚಿಸಬಹುದು.

## ಅಧ್ಯಾಯ-VI

### ಪ್ರವಾಸಿ ತಾಣಗಳ ಅಭಿವೃದ್ಧಿ ಮತ್ತು ಸಂವರ್ಧನೆ

**18. ಸಾರ್ವಜನಿಕ-ಖಾಸಗಿ ವಲಯ ಪಾಲುದಾರಿಕೆ ಮತ್ತು ಜಂಟಿ ಉದ್ಯಮದ ರಚನೆ.**- (1) ರಾಜ್ಯ ಪ್ರವಾಸೋದ್ಯಮ ಸಂಸ್ಥೆಗಳು, ನಿಯಮಿಸಬಹುದಾದ ಅಂಥ ನಿಯಮಗಳಿಗೆ ಒಳಪಟ್ಟು, ಪ್ರವಾಸೋದ್ಯಮ ಮೂಲಸೌಕರ್ಯ ಮತ್ತು ಸೌಲಭ್ಯಗಳ ಅಭಿವೃದ್ಧಿ, ಉತ್ತೇಜನ, ನಡೆಸುವಿಕೆ ಮತ್ತು ನಿರ್ವಹಣೆಯಲ್ಲಿ ಖಾಸಗಿ ವಲಯದ ಹೂಡಿಕೆಯನ್ನು ತರಲು ಸೂಕ್ತ ಸಾರ್ವಜನಿಕ-ಖಾಸಗಿ ಪಾಲುದಾರಿಕೆ ರೂಪುರೇಷೆ ಅಥವಾ ಜಂಟಿ ಉದ್ಯಮ ಏರ್ಪಾಡುಗಳ ಅಡಿಯಲ್ಲಿ ಖಾಸಗಿ ವಲಯದೊಂದಿಗೆ ಪ್ರವೃತ್ತನಾಗತಕ್ಕದ್ದು.

(2) ಸರ್ಕಾರವು ಪ್ರವಾಸಿ ತಾಣಗಳ ಅಂಗೀಕಾರಕ್ಕಾಗಿ ಅವಶ್ಯಕ ನಿಯಮಗಳನ್ನು ರಚಿಸಬಹುದು.

## ಅಧ್ಯಾಯ-VII

### ಪ್ರವಾಸೋದ್ಯಮ ಕುರಿತು ಮಾಹಿತಿ

**19. ಅಂಕಿ-ಅಂಶದ ಮಾಹಿತಿ.**- (1) ಪ್ರವಾಸೋದ್ಯಮ ವ್ಯಾಪಾರದ ಪ್ರತಿಯೊಬ್ಬ ಮಾಲೀಕ ಮತ್ತು ಆಯೋಜಕನು, ಈ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ಅವನು ನೋಂದಾಯಿತನಾಗಿರಲಿ ಅಥವಾ ನೋಂದಾಯಿತನಾಗದೇ ಇರಲಿ, ನಿಯಮಿಸಬಹುದಾದ ಅಂಥ ಅಂಕಿಅಂಶದ ಮಾಹಿತಿಯನ್ನು ಅಥವಾ ಅಂಕಿಅಂಶದ ದತ್ತಾಂಶವನ್ನು, ಅಂಥ ಅವಧಿಯ ಅಂತರಗಳಲ್ಲಿ ಮತ್ತು ಅಂಥ ನಮೂನೆಯಲ್ಲಿ ಅಂಥ ಪ್ರಾಧಿಕಾರಕ್ಕೆ ಒದಗಿಸಲು ಕರ್ತವ್ಯಬದ್ಧನಾಗಿರತಕ್ಕದ್ದು.

(2) (1)ನೇ ಉಪಪ್ರಕರಣಕ್ಕೆ ಅನುಸಾರವಾಗಿ ಯಾವುದೇ ಮಾಹಿತಿಯನ್ನು ಅಥವಾ ಅಂಕಿ-ಅಂಶಗಳನ್ನು ಒದಗಿಸುವುದು ಅಗತ್ಯವಾಗಿದ್ದಾಗ, ಯಾವೊಬ್ಬ ವ್ಯಕ್ತಿ, ಕಂಪನಿ, ಸಂಘ ಅಥವಾ ಫರ್ಮು ಅಥವಾ ಯಾವುದೇ ಇತರ ಸಂಸ್ಥೆಯು,-

(ಎ) ಕಾರಣವಿಲ್ಲದೆ, ಸಂಬಂಧಪಟ್ಟ ಮಾಹಿತಿಯನ್ನು ಅಥವಾ ಅಂಕಿ-ಅಂಶಗಳನ್ನು ಒದಗಿಸಲು ತಪ್ಪಿದರೆ ಅಥವಾ ನಿರಾಕರಿಸಿದರೆ; ಅಥವಾ

(ಬಿ) ವಸ್ತುಶಃ ತಪ್ಪಾಗಿರುವ ಅಥವಾ ತಪ್ಪು ದಾರಿಗೆಳೆಯುವ ಯಾವುದೇ ಮಾಹಿತಿಯನ್ನು ಅಥವಾ ಅಂಕಿ-ಅಂಶವನ್ನು ಗೊತ್ತಿದ್ದೂ ಒದಗಿಸಿದರೆ,

- ಆತನು ಅಪರಾಧದ ತಪ್ಪಿತಸ್ಥನಾಗಿರತಕ್ಕದ್ದು ಮತ್ತು ಅಪರಾಧ ನಿರ್ಣಯವಾದ ಮೇಲೆ ಒಂದು ಸಾವಿರ ರೂಪಾಯಿಗಳಿಗೆ ಮೀರದ ಜುಲ್ಮಾನೆಗೆ ಮತ್ತು ಎರಡನೆಯ ಅಥವಾ ತರುವಾಯದಲ್ಲಿ ನಿಯಮ ಪಾಲನೆ ಮಾಡದಿರುವುದಕ್ಕೆ ಎರಡು ಸಾವಿರ ರೂಪಾಯಿಗಳಿಗೆ ವಿಸ್ತರಿಸಬಹುದಾಗಿರುವ ಜುಲ್ಮಾನೆಗೆ ಗುರಿಯಾಗತಕ್ಕದ್ದು.

(3) (1)ನೇ ಉಪಪ್ರಕರಣದಲ್ಲಿ ಇರುವ ಉಪಬಂಧಗಳಿಗೆ ಅನುಸಾರವಾಗಿ ಅಂಕಿ ಅಂಶದ ಮಾಹಿತಿಯನ್ನು ಒದಗಿಸಲು ಬದ್ಧವಾಗಿರುವ ಯಾವೊಬ್ಬ ವ್ಯಕ್ತಿ, ಕಂಪನಿ, ಸಂಘ ಅಥವಾ ಫರ್ಮ್ ಅಥವಾ ಯಾವುದೇ ಇತರ ಸಂಸ್ಥೆಯು, (2)ನೇ ಉಪಪ್ರಕರಣದ ಅಡಿಯಲ್ಲಿ ದಂಡನೆಗಳನ್ನು ವಿಧಿಸಿದ ನಂತರವೂ, ಸದರಿ ಉಪಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸುವುದನ್ನು ಮುಂದುವರೆಸಿದರೆ, ಅಪರಾಧ ನಿರ್ಣಯವಾದ ಮೇಲೆ ಎರಡು ತಿಂಗಳುಗಳಿಗೆ ವಿಸ್ತರಿಸಬಹುದಾದ ಸಾದಾ ಕಾರಾವಾಸದಿಂದ ಅಥವಾ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

**20. ಪ್ರವಾಸೋದ್ಯಮ ಕುರಿತ ದತ್ತಾಂಶಾಧಾರಿತ ಅಭಿವೃದ್ಧಿ ಮತ್ತು ಮಾಹಿತಿಯ ಪ್ರಸಾರ.**-(1) ಪ್ರವಾಸೋದ್ಯಮ ಇಲಾಖೆಯು, ಕರ್ನಾಟಕದಲ್ಲಿ ಪ್ರವಾಸೋದ್ಯಮ ವಲಯಕ್ಕಾಗಿ ದತ್ತಾಂಶಾಧಾರಿತ ಸಮಗ್ರ ಪ್ರವಾಸೋದ್ಯಮವನ್ನು ಸ್ಥಾಪಿಸತಕ್ಕದ್ದು.

(2) ಪ್ರವಾಸೋದ್ಯಮ ಇಲಾಖೆಯು, ತಾನು ಹೊಂದಿರುವಂಥ ದತ್ತಾಂಶ ಮತ್ತು ಮಾಹಿತಿಯ ಸಂಬಂಧದಲ್ಲಿ, ಪ್ರವಾಸೋದ್ಯಮದಲ್ಲಿ ತೊಡಗಿಕೊಂಡಿರುವವರೆಲ್ಲರಿಗೆ (stakeholders) ಯಾವುವೇ ಸಾಧನಗಳ ಮೂಲಕ ದತ್ತಾಂಶ ಮತ್ತು ಮಾಹಿತಿಯು ಲಭ್ಯವಾಗುವಂತೆ, ಮತ್ತು ನೋಡಲು ಸಾಧ್ಯವಾಗುವಂತೆ ಹಂತಹಂತವಾಗಿ ಮಾಡತಕ್ಕದ್ದು.

(3) ಪ್ರವಾಸೋದ್ಯಮ ಇಲಾಖೆಯು, ಪ್ರವಾಸಿಗರಿಗೆ ಸೌಲಭ್ಯ ಕಲ್ಪಿಸಲು ಮತ್ತು ಪ್ರವಾಸೋದ್ಯಮ ವಲಯವನ್ನು ಉತ್ತೇಜಿಸಲು, ಪ್ರವಾಸೋದ್ಯಮ ಕುರಿತ ಮಾಹಿತಿಯ ಪ್ರಸಾರಕ್ಕಾಗಿ ವಿವಿಧ ವ್ಯವಸ್ಥೆಗಳನ್ನು ಮತ್ತು ಪ್ರವಾಸಿ ಮಾಹಿತಿ ವಿಭಾಗ (ಡೆಸ್ಕ್) ಗಳು, ಕೇಂದ್ರಗಳು ಇತ್ಯಾದಿಯಂಥ ಸೌಲಭ್ಯಗಳನ್ನು ಸ್ಥಾಪಿಸಲು ಪ್ರೋತ್ಸಾಹ ನೀಡತಕ್ಕದ್ದು.

## ಅಧ್ಯಾಯ-VIII

### ಸಂಕೀರ್ಣ

**21. ಸರ್ಕಾರದ ಕರ್ತವ್ಯಗಳು.-** ಈ ಮುಂದಿನ ಪ್ರತಿಯೊಂದು ವಿಷಯಕ್ಕಾಗಿ, ಸರ್ಕಾರವು ತಾನು ಕಾನೂನಾತ್ಮಕವಾಗಿ ಬಳಸಲು ಅಥವಾ ತೆಗೆದುಕೊಳ್ಳಲು ಸಕ್ಷಮವಾಗಿರುವ ಯಾವುವೇ ಸಾಧನಗಳ ಮೂಲಕ ಅಥವಾ ಕ್ರಮಗಳ ಮೂಲಕ ಯುಕ್ತ ಮತ್ತು ಸಾಕಷ್ಟು ಅವಕಾಶಗಳನ್ನು ಕಲ್ಪಿಸುವುದು ಸರ್ಕಾರದ ಹೊಣೆಯಾಗಿರುತ್ತದೆ,-

(ಎ) ಪ್ರವಾಸೋದ್ಯಮ ತಾಣಗಳಿಗೆ ರಸ್ತೆ ಅಥವಾ ರೈಲಿನ ನಿರ್ಮಾಣ ಮತ್ತು ನಿರ್ವಹಣೆ;

(ಬಿ) ಪ್ರವಾಸೋದ್ಯಮ ತಾಣಗಳಲ್ಲಿ ವಿಕಲಚೇತನರಿಗೆ ಮೂಲ ಸೌಕರ್ಯಗಳನ್ನು ಮತ್ತು ಉತ್ತಮ ಅವಕಾಶಗಳನ್ನು ಒದಗಿಸುವುದು;

(ಸಿ) ಪ್ರವಾಸೋದ್ಯಮ ತಾಣಗಳಲ್ಲಿ, ಮಹಿಳೆಯರು ತಮ್ಮ ಅವಶ್ಯಕತೆಗಳನ್ನು ಈಡೇರಿಸಿಕೊಳ್ಳುವುದಕ್ಕಾಗಿ ಮೂಲ ಸೌಲಭ್ಯಗಳನ್ನು ಒದಗಿಸುವುದು;

(ಡಿ) ಪ್ರವಾಸಿಯ ಸುರಕ್ಷತೆ ಮತ್ತು ಭದ್ರತೆ; ಹಾಗೂ

(ಇ) ನಿಯಮಿಸಬಹುದಾದ ಅಂಥ ಇತರ ಯಾವುದೇ ಕರ್ತವ್ಯಗಳು.

**22. ಸಾರ್ವಜನಿಕ ಆರೋಗ್ಯ ಮತ್ತು ನೈರ್ಮಲ್ಯ ಇತ್ಯಾದಿಗಳೆಡೆಗೆ ಸ್ಥಳೀಯ ಪ್ರಾಧಿಕಾರಗಳ ಕರ್ತವ್ಯಗಳು.-** (1) ರಾಜ್ಯದಲ್ಲಿ ಯಾವುದೇ ಕಾನೂನಿನಲ್ಲಿ ಏನೇ ಇದ್ದರೂ, ಪ್ರವಾಸೋದ್ಯಮ ತಾಣದ ಸ್ಥಳಗಳು ಯಾರ ಸ್ಥಳೀಯ ಪ್ರದೇಶಗಳಲ್ಲಿ ಇರುವವೋ ಆ ಸ್ಥಳೀಯ ಪ್ರಾಧಿಕಾರಗಳು, ಸ್ವಚ್ಛತೆಯನ್ನು ಖಚಿತಪಡಿಸಿಕೊಳ್ಳುವುದು ಮತ್ತು ಅವರವರ ಸ್ಥಳೀಯ ಪ್ರದೇಶದಲ್ಲಿನ ಸ್ವತ್ತುಗಳ ವಿರೂಪತೆಯನ್ನು ಮತ್ತು ಕಲುಷಿತಗೊಳಿಸಿರುವುದನ್ನು ಪರಿಶೀಲಿಸುವ ಮತ್ತು ರಸ್ತೆಗಳ ಮೇಲೆ ಮತ್ತು ಸಾರ್ವಜನಿಕ ಸ್ಥಳಗಳಲ್ಲಿ ಉಗಿಯುವುದನ್ನು ನಿಷೇಧಿಸುವ ಹಾಗೂ ರಸ್ತೆಗಳು ಚರಂಡಿಗಳು, ಮ್ಯಾನ್‌ಹೋಲ್‌ಗಳ ಸ್ವಚ್ಛತಾ ನಿರ್ವಹಣೆ ಮತ್ತು ಬೀದಿ ದೀಪಗಳ ನಿರ್ವಹಣೆ ಹಾಗೂ ಪ್ರವಾಸೋದ್ಯಮ ಸ್ಥಳದಲ್ಲಿ ಮತ್ತು ಸುತ್ತಮುತ್ತಲೂ ಅತಿಕ್ರಮ ಪ್ರವೇಶದ ನಿರ್ಬಂಧದ ಕಾನೂನುಗಳನ್ನು ಪರಿಣಾಮಕಾರಿಯಾಗಿ ಜಾರಿಗೆ ತರುವ ಕರ್ತವ್ಯವನ್ನು ಹೊಂದಿರತಕ್ಕದ್ದು.

(2) ಪ್ರವಾಸೋದ್ಯಮ ಇಲಾಖೆಯು, (1)ನೇ ಉಪಪ್ರಕರಣದಲ್ಲಿ ಇರುವ ಉಪಬಂಧಗಳನ್ನು ಪಾಲಿಸಲಾಗಿದೆ ಎಂಬುದನ್ನು ಮೇಲ್ವಿಚಾರಣೆ ಮಾಡತಕ್ಕದ್ದು ಮತ್ತು ಸಂಬಂಧಪಟ್ಟ ಸ್ಥಳೀಯ ಪ್ರಾಧಿಕಾರಗಳಿಗೆ ಅವರ ಶಾಸನಬದ್ಧ ಕರ್ತವ್ಯಗಳ ಕಡ್ಡಾಯ ಪಾಲನೆಗಾಗಿ ಹಾಗೂ ಸತತವಾಗಿ ಅನುಪಾಲನೆ ಮಾಡದಿರುವ ಮತ್ತು ತಪ್ಪಿದ ಸಂದರ್ಭದಲ್ಲಿ, ಅಂಥ ಸ್ಥಳೀಯ ಪ್ರಾಧಿಕಾರಗಳನ್ನು ನಿಯಂತ್ರಿಸುವ ಕಾನೂನುಗಳಿಗೆ ಅನುಸಾರವಾಗಿ ತಪ್ಪು ಮಾಡಿದ ಸ್ಥಳೀಯ ಪ್ರಾಧಿಕಾರಗಳ ವಿರುದ್ಧ ಕ್ರಮ ಜರುಗಿಸಲು ನಿರ್ದೇಶನಗಳನ್ನು ನೀಡಬಹುದು.

**23. ಪ್ರವಾಸೋದ್ಯಮ ತಾಣಗಳಲ್ಲಿ ಕೆಲವು ಚಟುವಟಿಕೆಗಳ ನಿಷೇಧ.-** (1) ಯಾವೊಬ್ಬ ವ್ಯಕ್ತಿಯು,-

(ಎ) ಯಾವೊಬ್ಬ ಪ್ರವಾಸಿಯ ವಿರುದ್ಧ, ಪೀಡಿಸುವ ಅಥವಾ ದುರಾಚರಣೆಯ ಯಾವುದೇ ಕೃತ್ಯವನ್ನು ಎಸಗತಕ್ಕದ್ದಲ್ಲ ಅಥವಾ ಯಾವುದೇ ಪ್ರವಾಸಿ ತಾಣದಲ್ಲಿ ಭಿಕ್ಷೆಯನ್ನು ಬೇಡತಕ್ಕದ್ದಲ್ಲ ಅಥವಾ ಬೀದಿ ವ್ಯಾಪಾರದ ವಸ್ತುಗಳ ಮಾರಾಟದಲ್ಲಿ ತೊಡಗತಕ್ಕದ್ದಲ್ಲ;

(ಬಿ) ಪ್ರವಾಸಿ ತಾಣದಲ್ಲಿ, ಯಾವೊಬ್ಬ ಪ್ರವಾಸಿಯ ವಿರುದ್ಧ ಪೀಡಿಸುವಂತೆ ಅಥವಾ ದುರಾಚರಣೆಯ ಯಾವುದೇ ಕೃತ್ಯವನ್ನು ಮಾಡುವಂತೆ ಮತ್ತು ಭಿಕ್ಷೆಯನ್ನು ಬೇಡುವಂತೆ ಅಥವಾ ವಸ್ತುಗಳ ಬೀದಿ ವ್ಯಾಪಾರವನ್ನು ಮಾಡುವಂತೆ ಮಾಡಲು ದುಷ್ಪ್ರೇರಿಸತಕ್ಕದ್ದಲ್ಲ; ಮತ್ತು

(ಸಿ) ಪ್ರವಾಸಿ ತಾಣದಲ್ಲಿ, ಯಾವೊಬ್ಬ ಪ್ರವಾಸಿಯ ವಿರುದ್ಧ ಪೀಡಿಸುವಂತೆ ಅಥವಾ ದುರಾಚರಣೆಯ ಯಾವುದೇ ಕೃತ್ಯವನ್ನು ಮಾಡಲು ಪ್ರಯತ್ನಿಸತಕ್ಕದ್ದಲ್ಲ.

(2) ಯಾವೊಬ್ಬ ವ್ಯಕ್ತಿಯು,-

(ಎ) (1)ನೇ ಉಪಪ್ರಕಣದ (ಎ) ಖಂಡದ ಉಪಬಂಧಗಳನ್ನು ಉಲ್ಲಂಘಿಸಿದ್ದು, ಅಪರಾಧ ನಿರ್ಣಯವಾದ ಮೇಲೆ ಆರು ತಿಂಗಳುಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಹತ್ತು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು;

(ಬಿ) (1)ನೇ ಉಪಪ್ರಕಣದ (ಬಿ) ಖಂಡದ ಉಪಬಂಧಗಳನ್ನು ಉಲ್ಲಂಘಿಸಿದ್ದು, ಅಪರಾಧ ನಿರ್ಣಯವಾದ ಮೇಲೆ, ಆರು ತಿಂಗಳುಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಐದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು;

(ಸಿ) (1)ನೇ ಉಪಪ್ರಕಣದ (ಸಿ) ಖಂಡದ ಉಪಬಂಧಗಳನ್ನು ಉಲ್ಲಂಘಿಸಿದ್ದು, ಅಪರಾಧ ನಿರ್ಣಯವಾದ ಮೇಲೆ, ಮೂರು ತಿಂಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಎರಡು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

(3) ಮಾರಾಟಕ್ಕಾಗಿ ವಸ್ತುಗಳನ್ನು ಬೀದಿ ವ್ಯಾಪಾರ ಮಾಡುವಲ್ಲಿ ತೊಡಗಿರುವ ಮತ್ತು (1)ನೇ ಉಪಪ್ರಕರಣದ ಅಡಿಯಲ್ಲಿ ಅಪರಾಧವನ್ನು ಎಸಗಿರುವ ಯಾವೊಬ್ಬ ವ್ಯಕ್ತಿಯನ್ನು ಪ್ರವಾಸಿ ಮಿತ್ರನು ಅಲ್ಲಿಂದ ಚದುರಿಸತಕ್ಕದ್ದು ಮತ್ತು ಅಂಥ ವ್ಯಕ್ತಿಗೆ ಆ ಪ್ರದೇಶವನ್ನು ತೊರೆಯಲು ಮತ್ತು ತಾನಾಗಿಯೇ ಆ ಪ್ರದೇಶದಿಂದ ದೂರ ಹೋಗುವಂತೆ ನಿರ್ದೇಶಿಸತಕ್ಕದ್ದು. ಪ್ರವಾಸಿ ಮಿತ್ರನು, ನಿಯಮಿಸಲಾದ ರೀತಿಯಲ್ಲಿ ಅವನು ನಿರ್ವಹಿಸಬೇಕಾಗಿರುವ ದಿನಚರಿಯಲ್ಲಿ ಈ ಸಂಗತಿಯ ನಮೂದನ್ನು ದಾಖಲಿಸತಕ್ಕದ್ದು.

(4) ಪ್ರವಾಸಿ ತಾಣಗಳಿಂದ ಯಾವೊಬ್ಬ ವ್ಯಕ್ತಿ ತಾನಾಗಿಯೇ ಅಲ್ಲಿಂದ ದೂರ ಹೋಗಲು (3)ನೇ ಉಪಪ್ರಕರಣದ ಅಡಿಯಲ್ಲಿ ನಿರ್ದೇಶನಗಳನ್ನು ನೀಡಿದಾಗ,-

(ಎ) ನಿರ್ದೇಶಿಸಲಾದಂತೆ ತಾನಾಗಿಯೇ ದೂರ ಹೋಗಲು ವಿಫಲರಾದಲ್ಲಿ; ಅಥವಾ

(ಬಿ) ತಾನಾಗಿಯೇ ದೂರ ಹೋಗಿ, ಆ ಪ್ರದೇಶವನ್ನು ಅಥವಾ ಅದರ ಭಾಗವನ್ನು ಮರುಪ್ರವೇಶಿಸಿದರೆ,

–ಯಾವೊಬ್ಬ ಪೋಲೀಸ್ ಅಧಿಕಾರಿಯು ಅವರನ್ನು ದಸ್ತಗಿರಿ ಮಾಡತಕ್ಕದ್ದು ಮತ್ತು ಆ ಪ್ರದೇಶದಿಂದ ದೂರ ಕಳುಹಿಸತಕ್ಕದ್ದು ಹಾಗೂ ಆ ಪ್ರದೇಶದಿಂದ ಹೊರಗೆ ಬಿಡತಕ್ಕದ್ದು ಮತ್ತು ಅಂಥ ದಸ್ತಗಿರಿಯ ಹಾಗೂ ಬಿಡುಗಡೆಯ ನಮೂದನ್ನು ಪೋಲೀಸ್ ಠಾಣೆಯಲ್ಲಿ ನಿರ್ವಹಿಸಲಾಗುವ ದೈನಂದಿನ ದಿನಚರಿಯಲ್ಲಿ ದಾಖಲಿಸತಕ್ಕದ್ದು.

(5) (3)ನೇ ಉಪಪ್ರಕರಣದ ಅಡಿಯಲ್ಲಿ ಉಲ್ಲಂಘನೆ ಮಾಡಿದ ಮತ್ತು ತತ್ಪರಿಣಾಮವಾಗಿ (4)ನೇ ಉಪಪ್ರಕರಣದ ಅಡಿಯಲ್ಲಿ ಆತನನ್ನು ದೂರ ಕಳುಹಿಸಿದ ತರುವಾಯವೂ, ವಸ್ತುಗಳ ಬೀದಿ ಮಾರಾಟದಲ್ಲಿ ಮತ್ತೆ ತೊಡಗಿಕೊಳ್ಳುವ ಯಾವೊಬ್ಬ ಅಪರಾಧಿಯನ್ನು ಯಾವೊಬ್ಬ ಪೋಲೀಸ್ ಅಧಿಕಾರಿಯು ದಸ್ತಗಿರಿ ಮಾಡತಕ್ಕದ್ದು ಮತ್ತು ಅಪರಾಧ ಎಸಗಿರುವ ಸ್ಥಳೀಯ ಪ್ರದೇಶದ ಜಿಲ್ಲಾಧಿಕಾರಿಯು ಈ ಬಗ್ಗೆ ಅಧಿಕೃತಗೊಳಿಸಿದ ತಹಶೀಲ್ದಾರನ ದರ್ಜೆಗಿಂತ ಕಡಿಮೆ ಇರದ ಯಾವೊಬ್ಬ ಅಧಿಕಾರಿಯ ಮುಂದೆ ಹಾಜರುಪಡಿಸತಕ್ಕದ್ದು. ಆತನು ಪೋಲೀಸ್ ಅಧಿಕಾರಿಯ ಹಾಗೂ ಅಪರಾಧಿಯ ಹೇಳಿಕೆಯನ್ನು ದಾಖಲಿಸತಕ್ಕದ್ದು ಮತ್ತು ಅಪರಾಧಿಯಿಂದ ಈ ಅಧಿನಿಯಮದ ಉಲ್ಲಂಘನೆಯ ಘಟನೆಗಳನ್ನು ತೋರಿಸುವ ದೈನಂದಿನ ದಿನಚರಿಯನ್ನು ಅಥವಾ ಇತರ ದಾಖಲೆಯನ್ನು ಪರಿಶೀಲಿಸತಕ್ಕದ್ದು ಹಾಗೂ ಅಪರಾಧಿ ಮತ್ತು ಪೋಲೀಸ್ ಅಧಿಕಾರಿಯ ಅಹವಾಲನ್ನು ಕೇಳಿದ ತರುವಾಯ ಸಂಕ್ಷಿಪ್ತ ರೀತಿಯಲ್ಲಿ ತನ್ನ ನಿರ್ಣಯಗಳನ್ನು ದಾಖಲಿಸತಕ್ಕದ್ದು ಮತ್ತು ಅಪರಾಧಿಯು ಈ ಪ್ರಕರಣದಲ್ಲಿ ಮೇಲೆ ಹೇಳಲಾದ ನಿಷೇಧಿತ ಉಲ್ಲಂಘನೆಯ ಅಪರಾಧಿಯಾಗಿರುವನೆಂದು ಕಂಡುಬಂದಲ್ಲಿ, ನಿಯಮಿಸಲಾದ ಅಧಿಕಾರಿಯು, (4)ನೇ ಉಪಪ್ರಕರಣದ ಉಪಬಂಧಗಳ ಉಲ್ಲಂಘನೆಗಾಗಿ ಐದು ನೂರು ರೂಪಾಯಿಗಳನ್ನು ಮೀರದ ಜುಲ್ಮಾನೆಯನ್ನು ವಿಧಿಸತಕ್ಕದ್ದು.

(6) (5)ನೇ ಉಪಪ್ರಕರಣದ ಅಡಿಯಲ್ಲಿ ದಂಡಿತನಾದ ತರುವಾಯವೂ ಯಾವುದೇ ಪ್ರವಾಸೋದ್ಯಮ ತಾಣದಲ್ಲಿ ವಸ್ತುಗಳ ಬೀದಿ ವ್ಯಾಪಾರ ಮಾಡಿದ್ದಕ್ಕೆ ವಿಧಿಸಲಾದ ನಿಷೇಧಿತ ಯಾವುದೇ ತರುವಾಯದ ಉಲ್ಲಂಘನೆಯನ್ನು ಮಾಡುವ ಯಾರನ್ನೇ ಆಗಲಿ, ಯಾವೊಬ್ಬ ಪೋಲೀಸ್ ಅಧಿಕಾರಿಯು ವಾರೆಂಟ್ ಇಲ್ಲದೇ ದಸ್ತಗಿರಿ ಮಾಡತಕ್ಕದ್ದು ಮತ್ತು ಅಪರಾಧಿಯನ್ನು ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ನ್ಯಾಯಿಕ ದಂಡಾಧಿಕಾರಿಯ ಮುಂದೆ ಹಾಜರುಪಡಿಸತಕ್ಕದ್ದು ಮತ್ತು ಅಪರಾಧ ನಿರ್ಣಯವಾದ ಮೇಲೆ ಆತನು ಒಂದು ವರ್ಷಕ್ಕೆ ವಿಸ್ತರಿಸಬಹುದಾದ ಕಾರಾವಾಸದಿಂದ ಅಥವಾ ಮೂರು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

**24. ಪ್ರವಾಸಿ ತಾಣದ ರಕ್ಷಣೆ ಮತ್ತು ನಿರ್ವಹಣೆ.–** (1) ಸರ್ಕಾರವು, ಸರ್ಕಾರಿ ರಾಜ್ಯ ಪತ್ರದಲ್ಲಿ ಅಧಿಸೂಚನೆ ನೀಡುವ ಮೂಲಕ, ಇಡೀ ಕರ್ನಾಟಕ ರಾಜ್ಯಕ್ಕಾಗಲೀ ಅಥವಾ ಕರ್ನಾಟಕ ರಾಜ್ಯದ ಪ್ರತಿಯೊಂದು ಜಿಲ್ಲೆಗಾಗಲೀ, ಪ್ರವಾಸಿ ತಾಣದ ರಕ್ಷಣೆ ಮತ್ತು ನಿರ್ವಹಣೆಗಾಗಿ, ಸರ್ಕಾರದ ಗ್ರೂಪ್–ಬಿ ದರ್ಜೆಯ ಅಥವಾ ಅದರ ಮೇಲಿನ ದರ್ಜೆಯ ಯಾವೊಬ್ಬ ಅಧಿಕಾರಿಯನ್ನು ಸಕ್ಷಮ ಪ್ರಾಧಿಕಾರಿ ಎಂದು ಗೊತ್ತುಪಡಿಸಬಹುದು.

(2) ಯಾವೊಬ್ಬ ವ್ಯಕ್ತಿ, ಕಂಪನಿ, ಸಂಘ ಅಥವಾ ಫರ್ಮ್ ಅಥವಾ ಯಾವುದೇ ಇತರ ಸಂಸ್ಥೆಯು, ಯಾವುದೇ ಕಿರುಕುಳಕ್ಕೆ ಕಾರಣವಾಗತಕ್ಕದ್ದಲ್ಲ ಅಥವಾ ಯಾವುದೇ ಚಟುವಟಿಕೆ, ಪ್ರಕ್ರಿಯೆ ಅಥವಾ ನಿರ್ವಹಣೆ ಮುಂತಾದವನ್ನು ನಡೆಸತಕ್ಕದ್ದಲ್ಲ ಅಥವಾ ಯಾವುದೇ ಪ್ರವಾಸೀ ತಾಣದ ಪ್ರವಾಸೋದ್ಯಮದ ಬೆಳವಣಿಗೆಗೆ ಚ್ಯುತಿ ಮಾಡುವ ಅಥವಾ ದುಸ್ಥಿತಿಗೆ ತರುವ ಅಥವಾ ಹಾನಿ ಮಾಡುವ ಅಥವಾ ದುಸ್ಥಿಗೆ ತರುವ ಸಂಭವವಿರುವ ಅಥವಾ ಹಾನಿ ಮಾಡುವುದಕ್ಕೆ ಅಥವಾ ದುಸ್ಥಿತಿಗೆ ತರುವುದಕ್ಕೆ ಸಾಧ್ಯವಿರುವ ಅಥವಾ ಹಾನಿಯಾಗುವ ಅಥವಾ ದುಸ್ಥಿತಿಗೆ ತರುವ ಕಿರುಕುಳವನ್ನು ತಡೆಯಲು ಅಥವಾ ನಿವಾರಿಸಲು ಉಪೇಕ್ಷಿಸತಕ್ಕದ್ದಲ್ಲ.

(3) ಸಕ್ಷಮ ಪ್ರಾಧಿಕಾರವು, ಸ್ವಪ್ರೇರಣೆಯಿಂದಾಗಲೀ ಅಥವಾ ಅದು ಸ್ವೀಕರಿಸಿದ ದೂರಿನ ಆಧಾರದ ಮೇಲಾಗಲೀ ಅಥವಾ ಅದಕ್ಕೆ ಮಾಡಿದ ಉಲ್ಲೇಖದ ಮೇಲಾಗಲೀ, ಸದರಿ ಸಕ್ಷಮ ಪ್ರಾಧಿಕಾರದ ಅಭಿಪ್ರಾಯದಲ್ಲಿ, ಯಾವುದೇ ಪ್ರವಾಸಿ ತಾಣದ ಪ್ರವಾಸೋದ್ಯಮದ ಬೆಳವಣಿಗೆಗೆ ಅದು ಹಾನಿ ಮಾಡಿದೆ ಅಥವಾ ದುಸ್ಥಿತಿಗೆ ತಂದಿದೆ ಅಥವಾ ಹಾನಿ ಮಾಡುವ ಅಥವಾ ದುಸ್ಥಿತಿಗೆ ತರುವ ಸಂಭವವಿದೆ ಎಂದಾದಲ್ಲಿ, ಪೂರ್ವ ಸೂಚನೆಯನ್ನು ನೀಡಿದ ತರುವಾಯ ಲಿಖಿತದಲ್ಲಿನ ಆದೇಶದ ಮೂಲಕ ಆಗುತ್ತಿರುವ ಯಾವುದೇ ಉಪದ್ರವವನ್ನು ತಡೆಗಟ್ಟಬಹುದು ಅಥವಾ ಮೇಲಿನ (2)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಲಾದ ಯಾವುದೇ ಅಂಥ ಚಟುವಟಿಕೆ, ಪ್ರಕ್ರಿಯೆ, ಕಾರ್ಯನಿರ್ವಹಣೆ ನಡೆಯುವುದನ್ನು ತಡೆಯಬಹುದು, ಮತ್ತು ತಾನು ಸೂಕ್ತವೆಂದು ಭಾವಿಸಬಹುದಾದಂತೆ ಅಂಥ ಮಧ್ಯಂತರ ಆದೇಶವನ್ನು ಹೊರಡಿಸಬಹುದು.

(4) ಸಕ್ಷಮ ಪ್ರಾಧಿಕಾರದ ಅಭಿಪ್ರಾಯದಲ್ಲಿ, ಉಪದ್ರವವು ಪ್ರವಾಸೋದ್ಯಮದ ಬೆಳವಣಿಗೆಯ ಮೇಲೆ ಪ್ರಭಾವ ಬೀರುವಂತಿದ್ದರೆ, ಆ ವಸ್ತುವಿನ ಮಾಲೀಕ, ಅಧಿಭೋಗದಾರ, ಬಾಡಿಗೆದಾರ, ಸನ್ನದುದಾರ ಅಥವಾ ಆ ವಸ್ತುವಿನ ಬಳಕೆಯ ಹಕ್ಕನ್ನು ಅನುಭವಿಸುತ್ತಿರುವ ಅಥವಾ ಅದರ ನಿಯಂತ್ರಣ ಹೊಂದಿರುವ ಯಾವೊಬ್ಬ ವ್ಯಕ್ತಿಗೆ ನೋಟೀಸನ್ನು ನೀಡತಕ್ಕದ್ದು ಮತ್ತು ಅಂಥ ವ್ಯಕ್ತಿಯು, ಅಂಥ ನೋಟೀಸನ್ನು ಸ್ವೀಕರಿಸಿದ ದಿನಾಂಕದಿಂದ ಹದಿನೈದು ದಿನಗಳ ಅವಧಿಯ ಒಳಗಾಗಿ ಅದನ್ನು ಕೊನೆಗೊಳಿಸತಕ್ಕದ್ದು ಅಥವಾ ನಿವಾರಣೆ ಮಾಡತಕ್ಕದ್ದು, ಹಾಗೂ ಸದರಿ ಹದಿನೈದು ದಿನಗಳ ಅವಧಿಯೊಳಗಾಗಿ ಅಥವಾ ಸಕ್ಷಮ ಪ್ರಾಧಿಕಾರವು ವಿಸ್ತರಿಸಬಹುದಾದ, ಆದರೆ ಮೂರು ತಿಂಗಳುಗಳನ್ನು, ಮೀರದ, ಅಂಥ ಹೆಚ್ಚಿನ ಅವಧಿಯೊಳಗಾಗಿ ಅದನ್ನು ನಿವಾರಿಸಿದ ಅಥವಾ ಕೊನೆಗೊಳಿಸಿದ ಹೊರತು, ಸಕ್ಷಮ ಪ್ರಾಧಿಕಾರವು ಅಂಥ ಉಪದ್ರವದ ನಿವಾರಣೆ ಮಾಡತಕ್ಕದ್ದು.

(5) ಉಪದ್ರವದ ನಿವಾರಣೆಯ ನೋಟೀಸನ್ನು ಯಾರ ವಿರುದ್ಧ ನೀಡಲಾಗಿದೆಯೋ ಆ ಮಾಲೀಕ, ಅಧಿಭೋಗದಾರ, ಬಾಡಿಗೆದಾರ, ಸನ್ನದುದಾರ ಅಥವಾ ಯಾವೊಬ್ಬ ವ್ಯಕ್ತಿಯು, ಸಕ್ಷಮ ಪ್ರಾಧಿಕಾರವು ನಿಗದಿಪಡಿಸಿದ ಅವಧಿಯೊಳಗೆ ಅಂಥ ಉಪದ್ರವದ ನಿವಾರಣೆಯ ಆದೇಶವನ್ನು ಪಾಲಿಸಲು ವಿಫಲನಾದ ತರುವಾಯ, ಉಪದ್ರವದ ಮುಖ್ಯ ವಸ್ತು ಅಥವಾ ಪದಾರ್ಥವನ್ನು ಬಹಿರಂಗ ಹರಾಜಿನಲ್ಲಿ ಮಾರಾಟ ಮಾಡಿದಾಗ, ಉಪದ್ರವದ ನಿವಾರಣೆಯ ವೆಚ್ಚಕ್ಕಿಂತ ಹೆಚ್ಚು ಮೊತ್ತ ಯಾವುದೇ ಇದ್ದಲ್ಲಿ ಅದನ್ನು ಮಾಲೀಕನಿಗೆ ಸಂದಾಯ ಮಾಡತಕ್ಕದ್ದು ಎಂಬುದನ್ನು ಹೊರತುಪಡಿಸಿ, ಮುಟ್ಟುಗೋಲಿಗೆ ಒಳಗಾಗತಕ್ಕದ್ದು ಮತ್ತು ಸರ್ಕಾರದಲ್ಲಿ ನಿಹಿತವಾಗತಕ್ಕದ್ದು. ನಿವಾರಣೆಯ ವೆಚ್ಚವು, ಹರಾಜಿನಲ್ಲಿ ಮಾರಾಟ ದರವನ್ನು ಮೀರಿದ ಸಂದರ್ಭದಲ್ಲಿ, ಬಾಕಿಯನ್ನು, (6)ನೇ ಉಪಪ್ರಕರಣದಲ್ಲಿ ಉಪಬಂಧಿಸಲಾದಂತೆ, ಸಂಬಂಧಪಟ್ಟ ಮಾಲೀಕನಿಂದ ವಸೂಲಿ ಮಾಡತಕ್ಕದ್ದು.

(6) ಸಕ್ಷಮ ಪ್ರಾಧಿಕಾರವು ಅಂಥ ಉಪದ್ರವವನ್ನು ನಿವಾರಿಸುವಲ್ಲಿ ಅಥವಾ ಕೊನೆಗೊಳಿಸುವಲ್ಲಿ ಭರಿಸಲಾದ ಖರ್ಚುಗಳು ಮತ್ತು ಮೊತ್ತಗಳು ಯಾವುವಾದರೂ ಇದ್ದರೆ, ಅಂಥ ಉಪದ್ರವವನ್ನು ಮಾಡಿದಂಥ ವ್ಯಕ್ತಿಯಿಂದ ಅಥವಾ ಉಪದ್ರವಕ್ಕೆ ಕಾರಣವಾಗಿರುವ ವಸ್ತುವಿನ ಮಾಲೀಕ/ ಅಧಿಭೋಗದಾರನಿಂದ, ಭೂ–ಕಂದಾಯ ಬಾಕಿಯನ್ನು ವಸೂಲು ಮಾಡುವ ರೀತಿಯಲ್ಲಿಯೇ ವಸೂಲು ಮಾಡತಕ್ಕದ್ದು.

(7) ಈ ಅಧಿನಿಯಮದ ಅಡಿಯಲ್ಲಿ ಉಪದ್ರವವಾಗಿರುವ, ಯಾವುದೇ ಸ್ವತ್ತು, ಸಾಮಗ್ರಿ ಅಥವಾ ವಸ್ತುವನ್ನು, ಸರ್ಕಾರವು, ತಾನು ಸೂಕ್ತವೆಂದು ಭಾವಿಸಬಹುದಾದಂಥ ರೀತಿಯಲ್ಲಿ ವಿಲೆ ಮಾಡಬಹುದು ಅಥವಾ ವ್ಯವಹರಿಸಬಹುದು.

(8) ಈ ಅಧಿನಿಯಮದ ಯಾವುದೇ ಉಪಬಂಧಗಳನ್ನು ಉಲ್ಲಂಘಿಸುವ ಅಥವಾ ಅಧಿನಿಯಮದ ಅಡಿಯಲ್ಲಿ ನೀಡಲಾದ ಯಾವುದೇ ಆದೇಶವನ್ನು ಅಥವಾ ನಿರ್ದೇಶನಗಳನ್ನು ಪಾಲಿಸಲು ವಿಫಲನಾಗುವ ಅಥವಾ ಈ ಅಧಿನಿಯಮದ ಅಡಿಯಲ್ಲಿ ತನ್ನ ಅಧಿಕಾರಗಳನ್ನು ಚಲಾಯಿಸುವುದರಿಂದ ಅಥವಾ ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವುದರಿಂದ ಸಕ್ಷಮ ಪ್ರಾಧಿಕಾರದ ಆದೇಶಗಳು ಅಥವಾ ನಿರ್ದೇಶನಗಳ ಅಡಿಯಲ್ಲಿ ಕಾರ್ಯನಿರ್ವಹಿಸುವ ಯಾವೊಬ್ಬ ವ್ಯಕ್ತಿಯನ್ನು ತಡೆಯುವ ಯಾರೇ ಆಗಲಿ ಅಪರಾಧ ನಿರ್ಣಯವಾದ ನಂತರ, ಮೂರು ತಿಂಗಳುಗಳಿಗಿಂತ ಕಡಿಮೆ ಇರದ, ಆದರೆ ಮೂರು ವರ್ಷಗಳಿಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಐದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

**25. ಮಾನ್ಯತೆಯನ್ನು ತಪ್ಪಾಗಿ ತೋರಿಸುವುದಕ್ಕಾಗಿ ದಂಡನೆ.–** ಯಾವೊಬ್ಬ ವ್ಯಕ್ತಿ, ಕಂಪನಿ, ಸಂಘ ಅಥವಾ ಫರ್ಮ್ ಅಥವಾ ಯಾವುದೇ ಇತರ ಸಂಸ್ಥೆಯು, ಈ ಅಧಿನಿಯಮದ ಅಡಿಯಲ್ಲಿ ನೋಂದಾಯಿಸಲಾದಂತೆ ಅಥವಾ ಶ್ರೇಣೀಕರಿಸಲಾದಂತೆ, ಯಾವುದೇ ಪ್ರವಾಸೋದ್ಯಮ ವ್ಯಾಪಾರವನ್ನು ತಪ್ಪಾಗಿ ಪ್ರತಿನಿಧಿಸಿದರೆ, ನಿಯಮಿಸಲಾದ ಪ್ರಾಧಿಕಾರವು, ಮೊದಲ ಅಂಥ ಅಪರಾಧಕ್ಕಾಗಿ ಐವತ್ತು ಸಾವಿರ ರೂಪಾಯಿಗಳನ್ನು ಮೀರದ, ಮತ್ತು ಎರಡನೇ ಅಥವಾ ತರುವಾಯದ ಅಪರಾಧಕ್ಕಾಗಿ ಒಂದು ಲಕ್ಷ ರೂಪಾಯಿಗಳನ್ನು ಮೀರದ ದಂಡವನ್ನು ವಿಧಿಸತಕ್ಕದ್ದು:

ಪರಂತು, ದಂಡವನ್ನು ವಿಧಿಸಲು ಆದೇಶಿಸುವುದಕ್ಕೆ ಮೊದಲು, ನಿಯಮಿಸಲಾದ ಪ್ರಾಧಿಕಾರವು, ಸಂಬಂಧಪಟ್ಟ ವ್ಯಕ್ತಿ, ಕಂಪನಿ, ಸಂಘ ಅಥವಾ ಫರ್ಮು ಅಥವಾ ಯಾವುದೇ ಇತರ ಸಂಸ್ಥೆಗೆ ಅಹವಾಲು ಹೇಳಿಕೊಳ್ಳುವುದಕ್ಕೆ ಸೂಕ್ತ ಅವಕಾಶವನ್ನು ನೀಡತಕ್ಕದ್ದು.

(2) (1)ನೇ ಉಪಪ್ರಕರಣದ ಅಡಿಯಲ್ಲಿ ದಂಡವನ್ನು ವಿಧಿಸಿದ ತರುವಾಯವೂ, ಯಾವೊಬ್ಬ ವ್ಯಕ್ತಿ, ಕಂಪನಿ, ಸಂಘ ಅಥವಾ ಫರ್ಮು ಅಥವಾ ಯಾವುದೇ ಇತರ ಸಂಸ್ಥೆಯು, ತಾನು ಹಾಗೆಂದು ಮಾನ್ಯತೆಯನ್ನು ಪಡೆದಿರುವುದಾಗಿ ಅಥವಾ ನೋಂದಾಯಿತವಾಗಿರುವುದಾಗಿ ಪ್ರದರ್ಶಿಸುವುದನ್ನು ಅಥವಾ ತೋರಿಸುವುದನ್ನು ಮುಂದುವರಿಸಿದಲ್ಲಿ, ಆತನು ಅಪರಾಧ ನಿರ್ಣಯವಾದ ನಂತರ, ಮೂರು ತಿಂಗಳುಗಳಿಗೆ ವಿಸ್ತರಿಸಬಹುದಾದ ಅವಧಿಯ ಸಾದಾ ಕಾರಾವಾಸದಿಂದ ಅಥವಾ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

**26. ಸರ್ಕಾರಿ ಪ್ರವಾಸೋದ್ಯಮ ಮುದ್ರೆಯ ಅನಧಿಕೃತ ಬಳಕೆಗಾಗಿ ದಂಡನೆ.–** (1) ಯಾವೊಬ್ಬ ವ್ಯಕ್ತಿ, ಕಂಪನಿ, ಸಂಘ ಅಥವಾ ಫರ್ಮು ಅಥವಾ ಯಾವುದೇ ಇತರ ಸಂಸ್ಥೆಯು, ಅನುಮತಿಯಿಲ್ಲದೆ ಅಥವಾ ಅಧಿಕಾರವಿಲ್ಲದೆ ಸರ್ಕಾರಿ ಪ್ರವಾಸೋದ್ಯಮ ಸಂಸ್ಥೆಗಳಿಗೆ ಸೇರಿದ ಯಾವುದೇ ಮುದ್ರೆಯನ್ನು ಬಳಸತಕ್ಕದ್ದಲ್ಲ.

(2) (1)ನೇ ಉಪಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸುವ ಯಾವೊಬ್ಬ ವ್ಯಕ್ತಿ, ಕಂಪನಿ, ಸಂಘ ಅಥವಾ ಫರ್ಮು ಅಥವಾ ಯಾವುದೇ ಇತರ ಸಂಸ್ಥೆಯು, ಮೊದಲ ಅಂಥ ಅಪರಾಧಕ್ಕಾಗಿ ಐವತ್ತು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಮತ್ತು ಎರಡನೇ ಅಥವಾ ತರುವಾಯದ ಅಪರಾಧಕ್ಕಾಗಿ ಒಂದು ಲಕ್ಷ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ದಂಡವನ್ನು ಸಂದಾಯ ಮಾಡಲು ಹೊಣೆಗಾರನಾಗಿರತಕ್ಕದ್ದು:

ಪರಂತು, ದಂಡವನ್ನು ವಿಧಿಸಲು ಆದೇಶಿಸುವುದಕ್ಕೆ ಮೊದಲು, ನಿಯಮಿಸಲಾದ ಪ್ರಾಧಿಕಾರವು, ಸಂಬಂಧಪಟ್ಟ ವ್ಯಕ್ತಿ, ಕಂಪನಿ, ಸಂಘ ಅಥವಾ ಫರ್ಮು ಅಥವಾ ಯಾವುದೇ ಇತರ ಸಂಸ್ಥೆಗೆ ಅಹವಾಲನ್ನು ಹೇಳಿಕೊಳ್ಳಲು ಸೂಕ್ತ ಅವಕಾಶವನ್ನು ನೀಡತಕ್ಕದ್ದು.

(3) ನಿಯಮಿಸಲಾದ ಪ್ರಾಧಿಕಾರವು, (1)ನೇ ಉಪಪ್ರಕರಣದ ಅನುಪಾಲನೆಯನ್ನು ಪರಿಶೀಲಿಸಲು ತಪಾಸಣೆಯನ್ನು ಕೈಗೊಳ್ಳುವ ಅಧಿಕಾರಗಳನ್ನು ಹೊಂದಿರತಕ್ಕದ್ದು.

(4) (1)ನೇ ಉಪಪ್ರಕರಣದ ಅಡಿಯಲ್ಲಿ ದಂಡವನ್ನು ವಿಧಿಸಿದ ತರುವಾಯವೂ, ಯಾವೊಬ್ಬ ವ್ಯಕ್ತಿ, ಕಂಪನಿ, ಸಂಘ ಅಥವಾ ಫರ್ಮು ಅಥವಾ ಯಾವುದೇ ಇತರ ಸಂಸ್ಥೆಯು, ಸರ್ಕಾರಿ ಪ್ರವಾಸೋದ್ಯಮ ಮುದ್ರೆಯನ್ನು ಬಳಸುವುದನ್ನು ಮುಂದುವರಿಸಿದಲ್ಲಿ, ಆತನು ಅಪರಾಧ ನಿರ್ಣಯವಾದ ನಂತರ, ಮೂರು ತಿಂಗಳುಗಳಿಗೆ ವಿಸ್ತರಿಸಬಹುದಾದ ಅವಧಿಯ ಸಾದಾ ಕಾರಾವಾಸದಿಂದ ಅಥವಾ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

**27. ಸದುದ್ದೇಶದಿಂದ ತೆಗೆದುಕೊಂಡ ಕ್ರಮದ ಸಂರಕ್ಷಣೆ.**–ಈ ಅಧಿನಿಯಮದ ಅಥವಾ ಅದರ ಅಡಿಯಲ್ಲಿ ರಚಿಸಲಾದ ಅಥವಾ ರೂಪಿಸಲಾದ ಯಾವುವೇ ನಿಯಮಗಳು ಅಥವಾ ವಿನಿಯಮಗಳು ಅಥವಾ ಆದೇಶಗಳ ಅಡಿಯಲ್ಲಿ ಸದುದ್ದೇಶದಿಂದ ಮಾಡಿದ ಅಥವಾ ಮಾಡಲು ಉದ್ದೇಶಿಸಿದ ಯಾವುದೇ ಕಾರ್ಯದ ಸಂಬಂಧದಲ್ಲಿ, ಸರ್ಕಾರ ಅಥವಾ ಪರಿಷತ್ತು ಅಥವಾ ಪರಿಷತ್ತಿನ ಅಧ್ಯಕ್ಷರು ಅಥವಾ ಇತರ ಸದಸ್ಯರು ಅಥವಾ ಪರಿಷತ್ತಿನ ಸಿಬ್ಬಂದಿ ಅಥವಾ ಪ್ರತಿನಿಧಿಗಳು ಅಥವಾ ಪ್ರವಾಸಿ ಮಿತ್ರರ ವಿರುದ್ಧ ಯಾವುದೇ ದಾವೆ, ಕ್ಲೇಮು ಅಥವಾ ಇತರ ಕಾನೂನು ವ್ಯವಹರಣೆಗಳನ್ನು ಹೂಡತಕ್ಕದ್ದಲ್ಲ.

**28. ನ್ಯಾಯಾಲಯಗಳಿಂದ ಅಪರಾಧಗಳ ಸಂಜ್ಞೇಯತೆ.**–ಯಾವುದೆ ನ್ಯಾಯಾಲಯವು, ಸರ್ಕಾರ ಅಥವಾ ನಿಯಮಿಸಲಾದ ಪ್ರಾಧಿಕಾರದ ಅಧಿಕಾರದ ಮೂಲಕ ಅಥವಾ ಅದರ ಅಡಿಯಲ್ಲಿ ಸಲ್ಲಿಸಿದ ದೂರನ್ನುಳಿದು, ಈ ಅಧಿನಿಯಮದ III, IV, VII ಮತ್ತು VIIIನೇ ಅಧ್ಯಾಯಗಳ ಅಡಿಯಲ್ಲಿ ದಂಡನೀಯವಾದ ಯಾವುದೇ ಅಪರಾಧದ ಸಂಜ್ಞೇಯತೆಯನ್ನು ತೆಗೆದುಕೊಳ್ಳತಕ್ಕದ್ದಲ್ಲ.

**29. ಅಪೀಲು.–** (1) ಈ ಅಧಿನಿಯಮದ ಅಡಿಯಲ್ಲಿ ನಿಯಮಿಸಲಾದ ಅಥವಾ ಸಕ್ಷಮ ಪ್ರಾಧಿಕಾರವು ಹೊರಡಿಸಿದ ಆದೇಶದಿಂದ ಅಥವಾ ತೆಗೆದುಕೊಂಡ ನಿರ್ಣಯದಿಂದ ಬಾಧಿತನಾದ ಯಾವೊಬ್ಬ ವ್ಯಕ್ತಿಯು, ನಿಯಮಿಸಲಾದ ಅಥವಾ ಸಕ್ಷಮ ಪ್ರಾಧಿಕಾರದ ಆದೇಶ ಅಥವಾ ನಿರ್ಣಯದ ಪತ್ರವನ್ನು ಸ್ವೀಕರಿಸಿದ ದಿನಾಂಕದಿಂದ ಮೂವತ್ತು ದಿನಗಳ ಒಳಗಾಗಿ, ಅಪೀಲು ಪ್ರಾಧಿಕಾರಕ್ಕೆ ಅಪೀಲು ಸಲ್ಲಿಸಬಹುದು. ಅಪೀಲು ಪ್ರಾಧಿಕಾರವನ್ನು ನಿಯಮಿಸಬಹುದಾದ ಅಂಥ ವಿಧಾನದಲ್ಲಿ ನೇಮಕ ಮಾಡತಕ್ಕದ್ದು.

(2) ಅಪೀಲು ಪ್ರಾಧಿಕಾರವು, ನಿಯಮಿಸಬಹುದಾದ ಅಂಥ ಪ್ರಕ್ರಿಯೆಯನ್ನು ಅನುಸರಿಸಿದ ತರುವಾಯ, ಅದನ್ನು ಸ್ವೀಕರಿಸಿದ ದಿನಾಂಕದಿಂದ ಎರಡು ತಿಂಗಳುಗಳ ಅವಧಿಯ ಒಳಗಾಗಿ ಅಪೀಲನ್ನು ವಿಲೇ ಮಾಡತಕ್ಕದ್ದು.

**30. ಕಂಪನಿಗಳಿಂದ ಅಪರಾಧ.–** (1) ಈ ಅಧಿನಿಯಮದ ಅಡಿಯಲ್ಲಿ ಒಂದು ಅಪರಾಧವನ್ನು ಎಸಗಿದ ವ್ಯಕ್ತಿಯು ಕಂಪನಿಯಾಗಿದ್ದರೆ, ಅಪರಾಧ ಎಸಗಿದ ಸಮಯದಲ್ಲಿ, ಕಂಪನಿಯ ಪ್ರಭಾರದಲ್ಲಿದ್ದ, ಮತ್ತು ಕಂಪನಿಯ ವ್ಯವಹಾರವನ್ನು ನಡೆಸುವುದಕ್ಕೆ ಜವಾಬ್ದಾರನಾಗಿದ್ದಂಥ ಪ್ರತಿಯೊಬ್ಬ

ವ್ಯಕ್ತಿಯನ್ನು, ಹಾಗೂ ಕಂಪನಿಯನ್ನು ಸಹ ಅಪರಾಧದ ತಪ್ಪಿತಸ್ಥನೆಂದು ಭಾವಿಸತಕ್ಕದ್ದು ಮತ್ತು ಅವನ ವಿರುದ್ಧದ ವ್ಯವಹರಣೆಗಳಿಗೆ ಗುರಿಯಾಗತಕ್ಕದ್ದು ಮತ್ತು ತದನುಸಾರವಾಗಿ ದಂಡಿತನಾಗತಕ್ಕದ್ದು:

ಪರಂತು, ಈ ಉಪಪ್ರಕರಣದಲ್ಲಿರುವುದು ಯಾವುದೂ, ಯಾವೊಬ್ಬ ಅಂಥ ವ್ಯಕ್ತಿಯನ್ನು, ಅಪರಾಧವು ತನ್ನ ಅರಿವಿಗೆ ಬರದೆ ನಡೆದಿತ್ತೆಂದು ಅಥವಾ ಅಂಥ ಅಪರಾಧವಾಗುವುದನ್ನು ತಡೆಯಲು ಎಲ್ಲ ಯುಕ್ತ ಜಾಗರೂಕತೆಯನ್ನು ವಹಿಸಿದ್ದೆನೆಂದು ಆತನು ರುಜುವಾತುಪಡಿಸಿದರೆ, ಈ ಅಧಿನಿಯಮದಲ್ಲಿ ಆತನನ್ನು ಉಪಬಂಧಿಸಿದ ಅಂಥ ದಂಡನೆಗೆ ಹೊಣೆಗಾರನನ್ನಾಗಿ ಮಾಡತಕ್ಕದ್ದಲ್ಲ.

(2) (1)ನೇ ಉಪಪ್ರಕರಣದಲ್ಲಿ ಏನೇ ಇದ್ದರೂ, ಈ ಅಧಿನಿಯಮದ ಅಡಿಯಲ್ಲಿ ಅಪರಾಧವನ್ನು ಮಾಡಲಾಗಿದ್ದಲ್ಲಿ ಮತ್ತು ಅಪರಾಧವನ್ನು, ಯಾವೊಬ್ಬ ನಿರ್ದೇಶಕ, ವ್ಯವಸ್ಥಾಪಕ, ಕಾರ್ಯದರ್ಶಿ ಅಥವಾ ಕಂಪನಿಯ ಇತರ ಅಧಿಕಾರಿಯ ಸಮ್ಮತಿಯಿಂದ ಅಥವಾ ಪರೋಕ್ಷ ಸಮ್ಮತಿಯಿಂದ ಅಥವಾ ಅವರ ಪರವಾಗಿ ಯಾವುದೇ ನಿರ್ಲಕ್ಷ್ಯದಿಂದ ಎಂದು ಹೇಳಬಹುದಾದ ಕಾರಣದಿಂದ ಮಾಡಲಾಗಿದೆ ಎಂದು ರುಜುವಾತುಪಟ್ಟಲ್ಲಿ, ಅಂಥ ನಿರ್ದೇಶಕ, ವ್ಯವಸ್ಥಾಪಕ, ಕಾರ್ಯದರ್ಶಿ ಅಥವಾ ಇತರ ಅಧಿಕಾರಿಯನ್ನು ಸಹ ಆ ಅಪರಾಧದ ತಪ್ಪಿತಸ್ಥನೆಂದು ಭಾವಿಸತಕ್ಕದ್ದು ಮತ್ತು ವ್ಯವಹರಣೆಗೆ ಗುರಿಯಾಗತಕ್ಕದ್ದು ಹಾಗೂ ತದನುಸಾರವಾಗಿ ದಂಡಿತನಾಗತಕ್ಕದ್ದು.

**ವಿವರಣೆ:–** ಈ ಪ್ರಕರಣದ ಉದ್ದೇಶಕ್ಕಾಗಿ,–

(ಎ) **"ಕಂಪನಿ"** ಎಂದರೆ, ಯಾವುದೇ ನಿಗಮಿತ ನಿಕಾಯ, ಮತ್ತು ಫರ್ಮು ಅಥವಾ ವ್ಯಕ್ತಿಗಳ ಇತರ ಸಂಘವನ್ನು ಒಳಗೊಳ್ಳುತ್ತದೆ; ಮತ್ತು

(ಬಿ) ಫರ್ಮಿನ ಸಂಬಂಧದಲ್ಲಿ **"ನಿರ್ದೇಶಕ"** ಎಂದರೆ, ಫರ್ಮಿನಲ್ಲಿನ ಪಾಲುದಾರ.

**31. ಸಮನು ಮಾಡುವುದಕ್ಕೆ ನಿಯಮಿಸಲಾದ ಅಥವಾ ಸಕ್ಷಮ ಪ್ರಾಧಿಕಾರದ ಮತ್ತು ಅಪೀಲು ಪ್ರಾಧಿಕಾರದ ಅಧಿಕಾರಗಳು.–** (1) ನಿಯಮಿಸಲಾದ ಅಥವಾ ಸಕ್ಷಮ ಪ್ರಾಧಿಕಾರ ಮತ್ತು ಅಪೀಲು ಪ್ರಾಧಿಕಾರವು, ಈ ಮುಂದಿನ ವಿಷಯಗಳಿಗೆ ಸಂಬಂಧಿಸಿದಂತೆ, ಸಿವಿಲ್ ಪ್ರಕ್ರಿಯಾ ಸಂಹಿತೆ, 1908ರ ಅಡಿಯಲ್ಲಿ ಸಿವಿಲ್ ನ್ಯಾಯಾಲಯದಲ್ಲಿ ನಿಹಿತವಾಗಿರುವ ಎಲ್ಲ ಅಧಿಕಾರಗಳನ್ನು ಹೊಂದಿರತಕ್ಕದ್ದು, ಎಂದರೆ,–

(i) ಯಾರ ವಿರುದ್ಧ ವಿಚಾರಣೆಯನ್ನು ನಡೆಸಬೇಕಾಗಿದೆಯೋ ಮತ್ತು ಅದರ ಸಂಬಂಧದಲ್ಲಿ ಸಾಕ್ಷ್ಯದ ಅಗತ್ಯವಿದೆಯೋ, ಆ ವ್ಯಕ್ತಿಯ ಸಮನು ಮಾಡುವುದು ಮತ್ತು ಹಾಜರಾತಿಯನ್ನು ಒತ್ತಾಯಿಸುವುದು;

(ii) ಯಾವುದೇ ದಸ್ತಾವೇಜಿನ ಹಾಜರಾತಿಯನ್ನು ಒತ್ತಾಯಿಸುವುದು; ಮತ್ತು

(iii) ಪ್ರಮಾಣದ ಸಾಕ್ಷಿದಾರನನ್ನು ಪರಿಶೀಲಿಸುವುದು.

(2) (1)ನೇ ಉಪಪ್ರಕರಣದ ಅಡಿಯಲ್ಲಿ ಉಪಬಂಧಿಸಿರುವುದಕ್ಕೆ ಹೆಚ್ಚುವರಿಯಾಗಿ, ನಿಯಮಿಸಲಾದ ಅಥವಾ ಸಕ್ಷಮ ಪ್ರಾಧಿಕಾರವು, ಯಾರ ಸಾಕ್ಷ್ಯವು ಅದರ ಅಭಿಪ್ರಾಯದಲ್ಲಿ, ಅದು ವಿಚಾರಣೆ ಮಾಡುತ್ತಿರುವ ಯಾವುದೇ ವಿಷಯದಲ್ಲಿ ನ್ಯಾಯಸಮ್ಮತ ನಿರ್ಣಯಕ್ಕೆ ಬರಲು ಮುಖ್ಯವಾಗಿ ಕಂಡುಬರುವುದೋ, ಆ ಯಾವೊಬ್ಬ ವ್ಯಕ್ತಿಯನ್ನು ಸ್ವಯಂ ಆಗಿ ಸಮನು ಮಾಡುವ ಅಥವಾ ಪರಿಶೀಲಿಸುವ ಅಧಿಕಾರವನ್ನು ಹೊಂದಿರತಕ್ಕದ್ದು.

(3) ಸಾಕ್ಷಿದಾರನ ಮತ್ತು ಮೇಲೆ ತಿಳಿಸಿದ ಇತರ ವ್ಯಕ್ತಿಗಳ ಹಾಜರಾತಿಯನ್ನು ಒತ್ತಾಯಪಡಿಸುವ ಉದ್ದೇಶಕ್ಕಾಗಿ, ನಿಯಮಿಸಲಾದ ಅಥವಾ ಸಕ್ಷಮ ಪ್ರಾಧಿಕಾರದ ಅಧಿಕಾರ ವ್ಯಾಪ್ತಿಯ ಸ್ಥಳೀಯ ಪರಿಮಿತಿಯನ್ನು ಇಡೀ ರಾಜ್ಯಕ್ಕೆ ವಿಸ್ತರಿಸತಕ್ಕದ್ದು.

**32. ಇತರ ಕಾನೂನುಗಳ ಅಧ್ಯಾರೋಹಿ ಅಧಿನಿಯಮ.**–ಈ ಅಧಿನಿಯಮದಲ್ಲಿ ಉಪಬಂಧಿಸಿದುದನ್ನುಳಿದು, ಈ ಅಧಿನಿಯಮದ ಉಪಬಂಧಗಳು ಅದರೊಂದಿಗೆ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕರ್ನಾಟಕದ ಕಾನೂನಿನಲ್ಲಿ ಅಥವಾ ಯಾವುದೇ ಪದ್ಧತಿಯಲ್ಲಿ ಅಥವಾ ಆಚರಣೆಯಲ್ಲಿ ಅಥವಾ ಯಾವುದೇ ಅಂಥ ಕಾನೂನಿನ ಬಲದಿಂದ ಜಾರಿಯಲ್ಲಿರುವ ಲಿಖಿತಪತ್ರದಲ್ಲಿ ಅಸಂಗತವಾಗಿ ಏನೇ ಇದ್ದರೂ, ಪರಿಣಾಮಕಾರಿಯಾಗಿರತಕ್ಕದ್ದು.

**33. ಬಾಕಿ ವಸೂಲಿ.–** ಈ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ವಿಧಿಸಲಾದ ದಂಡ ಅಥವಾ ಜುಲ್ಮಾನೆಯ ಮೊತ್ತವನ್ನು, ಸಂದಾಯ ಮಾಡಲು ಹೊಣೆಗಾರನಾದ ವ್ಯಕ್ತಿಯು ದಂಡನೆಯನ್ನು ವಿಧಿಸಿ ಅಂತಿಮ ಆದೇಶವನ್ನು ನೀಡಿದ ದಿನಾಂಕದಿಂದ ಅರವತ್ತು ದಿನಗಳ ಒಳಗಾಗಿ ಸಂದಾಯ ಮಾಡದಿದ್ದರೆ, ಅದನ್ನು ಭೂ ಕಂದಾಯ ಬಾಕಿಯಂತೆ ವಸೂಲು ಮಾಡಿಕೊಳ್ಳತಕ್ಕದ್ದು.

**34. ತೊಂದರೆಗಳನ್ನು ನಿವಾರಿಸುವ ಅಧಿಕಾರ.–** (1)ಈ ಅಧಿನಿಯಮದ ಉಪಬಂಧಗಳನ್ನು ಅಥವಾ ನಿಯಮಗಳು, ವಿನಿಯಮಗಳು, ಯೋಜನೆಗಳು ಅಥವಾ ಇದರಲ್ಲಿ ಮಾಡಲಾದ ಆದೇಶಗಳನ್ನು ಪರಿಣಾಮಕಾರಿಯನ್ನಾಗಿ ಮಾಡುವಲ್ಲಿ ಉದ್ಭವಿಸುವ ಯಾವುದೇ ತೊಂದರೆಯನ್ನು, ಸರ್ಕಾರವು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಿದ ಆದೇಶದ ಮೂಲಕ, ತೊಂದರೆಯನ್ನು ನಿವಾರಿಸುವುದಕ್ಕಾಗಿ ಅವಶ್ಯಕ ಅಥವಾ ವಿಹಿತವೆಂದು ಅದಕ್ಕೆ ಕಂಡುಬರುವಂತೆ, ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಾಗದ ಅಂಥ ಉಪಬಂಧಗಳನ್ನು ರಚಿಸತಕ್ಕದ್ದು.

(2) (1)ನೇ ಉಪಪ್ರಕರಣದ ಅಡಿಯಲ್ಲಿ ಮಾಡಲಾದ ಎಲ್ಲ ಆದೇಶಗಳನ್ನು, ಅವುಗಳನ್ನು ಮಾಡಿದ ತರುವಾಯ ಸಾಧ್ಯವಾದಷ್ಟು ಬೇಗನೆ, ರಾಜ್ಯ ವಿಧಾನಮಂಡಲದ ಎರಡೂ ಸದನಗಳ ಮುಂದೆ ಮಂಡಿಸತಕ್ಕದ್ದು ಮತ್ತು ವಿಧಾನ ಮಂಡಲವು ಅದೇ ಅಧಿವೇಶನದಲ್ಲಿ ಅಥವಾ ಮುಂದಿನ ಅಧಿವೇಶನದಲ್ಲಿ ಮಾಡಬಹುದಾದ ತಿದ್ದುಪಡಿಯ ಅಥವಾ ನಿರಸನದ ಮೂಲಕ ಅಂಥ ಮಾರ್ಪಾಡುಗಳಿಗೆ ಒಳಪಡತಕ್ಕದ್ದು.

**35. ವಿನಿಯಮಗಳನ್ನು ರಚಿಸುವ ಅಧಿಕಾರ.–** ಪರಿಷತ್ತು, ಈ ಅಧಿನಿಯಮದ ಅಡಿಯಲ್ಲಿ ತನ್ನ ಪ್ರಕಾರ್ಯಗಳ ಯುಕ್ತ ನಿರ್ವಹಣೆ ಮತ್ತು ಸುಗಮ ನೆರವೇರಿಕೆಗಾಗಿ, ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ, ಸರ್ಕಾರದ ಅನುಮೋದನೆಯೊಂದಿಗೆ ವಿನಿಯಮಗಳನ್ನು ರಚಿಸಬಹುದು.

**36. ನಿಯಮಗಳ ರಚನಾಧಿಕಾರ.**–(1) ಈ ಅಧಿನಿಯಮದ ಎಲ್ಲಾ ಅಥವಾ ಯಾವುವೇ ಉದ್ದೇಶಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ, ನಿಯಮಗಳನ್ನು ರಚಿಸಬಹುದು.

(2) ಈ ಅಧಿನಿಯಮದ ಮೇರೆಗೆ ರಚಿಸಲಾದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ, ಆದಷ್ಟು ಬೇಗನೆ, ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ, ಅದು ಅಧಿವೇಶನದಲ್ಲಿರುವಾಗ, ಒಂದು ಅಧಿವೇಶನದಲ್ಲಿ ಅಥವಾ ಎರಡು ಅಥವಾ ಹೆಚ್ಚಿನ ನಿರಂತರ

ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಮಂಡಿಸತಕ್ಕದ್ದು ಮತ್ತು ಮೇಲೆ ಹೇಳಿದ ಅಧಿವೇಶನಗಳ ಅಥವಾ ನಿರಂತರ ಅಧಿವೇಶನಗಳ ನಿಕಟ ತರುವಾಯದ ಅಧಿವೇಶನದ ಮುಕ್ತಾಯಕ್ಕೆ ಮುಂಚೆ ಆ ನಿಯಮದಲ್ಲಿ ಅಥವಾ ಅಧಿಸೂಚನೆಯಲ್ಲಿ ಯಾವುದೇ ಮಾರ್ಪಾಟನ್ನು ಮಾಡಬೇಕೆಂದು ಎರಡೂ ಸದನಗಳೂ ಒಪ್ಪಿದರೆ ಅಥವಾ ಆ ನಿಯಮವನ್ನು ಅಥವಾ ಅಧಿಸೂಚನೆಯನ್ನು ಮಾಡಕೂಡದೆಂದು ಎರಡೂ ಸದನಗಳೂ ಒಪ್ಪಿದರೆ ಆ ನಿಯಮವು ಅಥವಾ ಅಧಿಸೂಚನೆಯು ಆ ಮಾರ್ಪಾಟನ್ನು ಅಥವಾ ರದ್ಧತಿಯನ್ನು ಅಧಿಸೂಚಿಸಿದ ದಿನಾಂಕದಿಂದ ಸಂದರ್ಭಾನುಸಾರ ಅಂಥ ಮಾರ್ಪಾಟಾದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗಿರತಕ್ಕದ್ದು ಅಥವಾ ಯಾವುದೇ ಪರಿಣಾಮ ಹೊಂದಿರತಕ್ಕದ್ದಲ್ಲ; ಆದಾಗ್ಯೂ ಅಂಥ ಯಾವುದೇ ಮಾರ್ಪಾಟು ಅಥವಾ ರದ್ಧತಿಯು ಆ ನಿಯಮದ ಮೇರೆಗೆ ಹಿಂದೆ ಮಾಡಿದ ಯಾವುದೇ ಕೃತ್ಯದ ಮಾನ್ಯತೆಗೆ ಬಾಧಕವಾಗತಕ್ಕದ್ದಲ್ಲ.

**37. ಅಧಿಕಾರಗಳ ಪ್ರತ್ಯಾಯೋಜನೆ.-** ಸರ್ಕಾರವು, ಅಧಿಸೂಚನೆಯ ಮೂಲಕ, ಈ ಅಧಿನಿಯಮದಡಿಯಲ್ಲಿ ನಿಯಮಗಳ ರಚನಾಧಿಕಾರವನ್ನು ಹೊರತುಪಡಿಸಿ, ಸರ್ಕಾರವು ಚಲಾಯಿಸಬಹುದಾದ ಯಾವುದೇ ಅಧಿಕಾರವನ್ನು ಅಂಥ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದ ಅಂಥ ನಿಬಂಧನೆಗಳಿಗೆ ಒಳಪಟ್ಟು, ಸರ್ಕಾರದ ಒಬ್ಬ ಅಧಿಕಾರಿಯು ಚಲಾಯಿಸತಕ್ಕದ್ದು ಎಂದು ನಿರ್ದೇಶಿಸಬಹುದು.

(2) ಸರ್ಕಾರವು, ನಿಯಮಗಳ ಮೂಲಕ, ಅದರಲ್ಲಿ ನಿಯಮಿಸಬಹುದಾದ ಅಂಥ ಇತರ ಅಧಿಕಾರಿಗೆ ತನ್ನ ಯಾವುದೇ ಅಥವಾ ಎಲ್ಲಾ ಪ್ರಕಾರ್ಯಗಳನ್ನು ಪ್ರತ್ಯಾಯೋಜಿಸಲು ನಿಯಮಿಸಲಾದ ಪ್ರಾಧಿಕಾರವನ್ನು ಅಧಿಕೃತಗೊಳಿಸಬಹುದು.

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

**(1)** ರಾಜ್ಯದಲ್ಲಿ ಪ್ರವಾಸೋದ್ಯಮ ವ್ಯಾಪಾರದ ಸೌಲಭ್ಯಗಳನ್ನು ನೀಡುವುದಕ್ಕಾಗಿ, ನಿಯಂತ್ರಣಕ್ಕಾಗಿ ಮತ್ತು ಉತ್ತೇಜನಕ್ಕಾಗಿ;

**(2)** ರಾಜ್ಯ ಪ್ರವಾಸೋದ್ಯಮ ಪರಿಷತ್ತನ್ನು ರಚಿಸುವುದಕ್ಕಾಗಿ;

**(3)** ಪ್ರವಾಸಿ ತಾಣಗಳಲ್ಲಿ ಪ್ರವಾಸೋದ್ಯಮ ವ್ಯಾಪಾರದ ನೋಂದಣಿ, ಮನ್ನಣೆ ಮತ್ತು ಶ್ರೇಣೀಕರಣಕ್ಕಾಗಿ;

**(4)** ಪ್ರವಾಸಿ ಮಾರ್ಗದರ್ಶಕರಿಗೆ ಲೈಸನ್ಸನ್ನು ನೀಡುವುದಕ್ಕಾಗಿ;

**(5)** ಪ್ರವಾಸಿಗಳ ಸುರಕ್ಷತೆಯನ್ನು ಖಚಿತಪಡಿಸಿಕೊಳ್ಳುವುದಕ್ಕೆ ಪ್ರವಾಸಿ ಮಿತ್ರರನ್ನು ನೇಮಿಸುವುದಕ್ಕಾಗಿ;

**(6)** ಪ್ರವಾಸಿ ತಾಣಗಳಲ್ಲಿ ಕೆಲವು ಚಟುವಟಿಕೆಗಳನ್ನು ತಡೆಗಟ್ಟುವುದಕ್ಕಾಗಿ;

**(7)** ಪ್ರವಾಸಿ ತಾಣಗಳ ರಕ್ಷಣೆ ಮತ್ತು ನಿರ್ವಹಣೆಗಾಗಿ;

**(8)** ಸೇವೆಗಳನ್ನು ನೀಡುವವರಿಂದ ಅಂಕಿ ಅಂಶಗಳ ಮಾಹಿತಿ ಸಂಗ್ರಹಣೆ ಹಾಗೂ ಪ್ರವಾಸೋದ್ಯಮದ ಮೇರೆಗೆ ದತ್ತಾಂಶ ಆಧಾರವನ್ನು (database) ಸ್ಥಾಪಿಸುವುದಕ್ಕಾಗಿ; ಮತ್ತು

**(9)** ಇದಕ್ಕೆ ಸಂಬಂಧಿಸಿದ ಇತರ ಅಥವಾ ಆನುಷಂಗಿಕ ವಿಷಯಗಳಿಗಾಗಿ,

–ಉಪಬಂಧಗಳನ್ನು ಕಲ್ಪಿಸುವುದು ಅವಶ್ಯಕ ಎಂದು ಪರಿಗಣಿಸಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮದಿಂದ ಸುಮಾರು 3 ಕೋಟಿ ರೂಪಾಯಿಗಳ ಆವರ್ತಕ ವೆಚ್ಚ ಉಂಟಾಗುವುದು.

**ಪ್ರತ್ಯಾಯೋಜಿತ ಶಾಸನ ರಚನೆಗೆ ಸಂಬಂಧಿಸಿದ ಜ್ಞಾಪನ ಪತ್ರ**

| | |
|---|---|
| ಖಂಡ 2 | (i) (ಎಲ್) ಉಪಖಂಡವು, ನಿಯಮಿಸಲಾದ ಪ್ರಾಧಿಕಾರ ಅಥವಾ ಪ್ರಾಧಿಕಾರಗಳನ್ನು ನೇಮಕ ಮಾಡುವುದಕ್ಕೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.<br>(ii) (ಪಿ) ಉಪಖಂಡವು, ಪ್ರವಾಸಿಗರಿಗೆ ಒದಗಿಸುವ ಪ್ರವಾಸೋದ್ಯಮ ಸಂಬಂಧಪಟ್ಟ ಸೌಲಭ್ಯಗಳು ಅಥವಾ ಚಟುವಟಿಕೆಗಳು ಅಥವಾ ಉತ್ಪನ್ನಗಳ ವರ್ಗ ಇವುಗಳಿಗೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| ಖಂಡ 7 | (1)ನೇ ಉಪಖಂಡದ (ಎಫ್) ಬಾಬು, ಪರಿಷತ್ತಿನಿಂದ ಚಲಾಯಿಸಬಹುದಾದ ಯಾವುದೇ ಇತರ ಅಧಿಕಾರಗಳು ಅಥವಾ ನಿರ್ವಹಿಸಬಹುದಾದ ಪ್ರಕಾರ್ಯಗಳಿಗೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| ಖಂಡ 8 | (i) (1)ನೇ ಉಪಖಂಡವು, ಪ್ರವಾಸಿ ತಾಣದಲ್ಲಿಯ ಪ್ರವಾಸೋದ್ಯಮ ವ್ಯಾಪಾರದ ಪ್ರತಿಯೊಂದು ಪ್ರವರ್ಗದ ನೋಂದಣಿಯ, ಮಾನ್ಯತೆಯ ಹಾಗೂ ಶ್ರೇಣೀಕರಣದ ಪ್ರಕ್ರಿಯೆಗೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.<br>(ii) (2)ನೇ ಉಪಖಂಡವು,<br>(ಎ)ಈ ಅಧಿನಿಯಮದ ಅಡಿಯಲ್ಲಿ ನೋಂದಾಯಿಸಬೇಕೆಂದು ಉದ್ದೇಶಿಸಲಾದ ಪ್ರವಾಸೋದ್ಯಮ ವ್ಯಾಪಾರದ ಗುಣಮಟ್ಟ ಮತ್ತು ಮಾನಕಗಳಿಗೆ ಸಂಬಂಧವಾಗಿ;<br>(ಬಿ) ನೋಂದಣಿ, ಮಾನ್ಯತೆ, ನವೀಕರಣ ಮತ್ತು ಶ್ರೇಣೀಕರಣಕ್ಕಾಗಿ ವಾರ್ಷಿಕ ಅಥವಾ ಇತರ ನಿಯತಕಾಲಿಕ ಶುಲ್ಕಗಳನ್ನು ವಿಧಿಸುವುದಕ್ಕಾಗಿ;<br>(ಸಿ) ನೋಂದಣಿ ಪ್ರಮಾಣ ಪತ್ರಗಳನ್ನು ನೀಡುವುದಕ್ಕಾಗಿ ಮತ್ತು ಪ್ರದರ್ಶಿಸುವುದಕ್ಕಾಗಿ ಹಾಗೂ ಪ್ರವಾಸೋದ್ಯಮ ವ್ಯಾಪಾರವು ನೋಂದಣಿ ಯಾಗಿದೆಯೆಂದು ತೋರಿಸುವ ಚಿಹ್ನೆಗಳನ್ನು ಪ್ರದರ್ಶಿಸುವುದಕ್ಕಾಗಿ; |

| | |
|---|---|
| | (ಡಿ) ಪ್ರವಾಸೋದ್ಯಮ ವ್ಯಾಪಾರದ ತಪಾಸಣೆಗಾಗಿ ಹಾಗೂ ಆ ಉದ್ದೇಶದ ಪ್ರವೇಶಾಧಿಕಾರಗಳಿಗಾಗಿ;<br>(ಇ) ವರ್ಗೀಕರಣ ಅಥವಾ ಶ್ರೇಣೀಕರಣವನ್ನು ನಡೆಸಲು ಅನ್ವಯವಾಗುವ ಮಾನದಂಡವನ್ನು ಅಗತ್ಯಪಡಿಸುವುದಕ್ಕಾಗಿ;<br>(ಎಫ್) ಹಾಗೆ ನಿರ್ಧರಿಸಲಾದ ಯಾವುದೇ ಮಾನದಂಡದ ಪ್ರಕಟಣೆಗಾಗಿ;<br>(ಜಿ) ನಿರ್ವಹಿಸಬೇಕಾದ ರಿಜಿಸ್ಟರು ಅಥವಾ ರಿಜಿಸ್ಟರುಗಳ ನಮೂನೆ ಮತ್ತು ಒಳಾಂಶಗಳ ಹಾಗೂ ಅದರಲ್ಲಿ ನೋಂದಣಿಯಾಗಬೇಕಾದ ಪ್ರವಾಸೋದ್ಯಮ ವ್ಯಾಪಾರದ ಸಂಬಂಧವಾಗಿ;<br>(ಎಚ್) ನೋಂದಣಿಯಾದ ಅಥವಾ ಶ್ರೇಣೀಕೃತ ಪ್ರವಾಸೋದ್ಯಮ ವ್ಯಾಪಾರಕ್ಕೆ ದೊರಕುವ ಪ್ರಯೋಜನಗಳು ಅಥವಾ ಪ್ರೋತ್ಸಾಹ ಧನಗಳಿಗೆ ಸಂಬಂಧವಾಗಿ; ಮತ್ತು<br>(ಐ) ಸರ್ಕಾರಕ್ಕೆ ಅಗತ್ಯ ಮತ್ತು ಯುಕ್ತವೆಂದು ಕಂಡುಬರಬಹುದಾದ ಅಂಥ ಇತರ ಪೂರಕ ಮತ್ತು ಆನುಷಂಗಿಕ ವಿಷಯಗಳ ಸಂಬಂಧವಾಗಿ,<br>– ನಿಯಮಗಳನ್ನು ರಚಿಸಲು ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| ಖಂಡ 9 | ಪ್ರವಾಸೋದ್ಯಮ ಸೌಲಭ್ಯದ ನೋಂದಣಿ, ಮನ್ನಣೆ ಮತ್ತು ಶ್ರೇಣೀಕರಣಕ್ಕೆ ಸಂಬಂಧಿಸಿದಂತೆ ಸಲ್ಲಿಸಬೇಕಾದ ಅರ್ಜಿಯ ವಿಧಾನ ಮತ್ತು ನಮೂನೆ ಹಾಗೂ ಶುಲ್ಕಗಳಿಗೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| ಖಂಡ 10 | (4)ನೇ ಉಪಖಂಡವು, ಪ್ರವಾಸೋದ್ಯಮ ವ್ಯಾಪಾರಕ್ಕೆ ನೀಡತಕ್ಕ ಪ್ರಮಾಣ ಪತ್ರದ ನಮೂನೆಗೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| ಖಂಡ 14 | (2)ನೇ ಉಪಖಂಡವು, ಯಾವ ಷರತ್ತುಗಳಿಗೆ ಒಳಪಟ್ಟು ಪ್ರವಾಸೋದ್ಯಮ ವ್ಯಾಪಾರದ ಮರುಶ್ರೇಣೀಕರಣಕ್ಕೆ ಸಂಬಂಧಿಸಿದಂತೆ ಸಲ್ಲಿಸಬೇಕಾದ ಶುಲ್ಕ ಹಾಗೂ ಅರ್ಜಿಯ ವಿಧಾನ ಮತ್ತು ನಮೂನೆ ಇವುಗಳ ಸಂಬಂಧದಲ್ಲಿಯ ಆ ಷರತ್ತುಗಳಿಗೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| ಖಂಡ 15 | 15ನೇ ಖಂಡವು ನೋಂದಣಿ, ಮನ್ನಣೆ ಮತ್ತು ಶ್ರೇಣೀಕರಣ ಪ್ರಮಾಣ ಪತ್ರದ ನವೀಕರಣದ ವಿಧಾನ ಮತ್ತು ಶುಲ್ಕಗಳಿಗೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| ಖಂಡ 16 | (i) (1)ನೇ ಉಪಖಂಡವು, ಪ್ರವಾಸಿ ಮಾರ್ಗದರ್ಶಿಗಳಿಗೆ ಲೈಸೆನ್ಸನ್ನು ನೀಡತಕ್ಕ ಪ್ರಕ್ರಿಯೆ ಹಾಗೂ ಅವನ ಆಯ್ಕೆಗಾಗಿ ಶೈಕ್ಷಣಿಕ ವಿದ್ಯಾರ್ಹತೆ, ಪಠ್ಯಕ್ರಮ ಹಾಗೂ ತರಬೇತಿ ಮತ್ತು ಕಾರ್ಯವಿಧಾನಗಳಿಗೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.<br>(ii) (3)ನೇ ಉಪಖಂಡವು, ಪ್ರವಾಸಿ ಮಾರ್ಗದರ್ಶಿ ಲೈಸೆನ್ಸುದಾರನು ತನ್ನ ಗುರುತಿನ ಚೀಟಿಯನ್ನು ಪ್ರದರ್ಶಿಸತಕ್ಕ ವಿಧಾನಕ್ಕೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| ಖಂಡ 17 | (7)ನೇ ಉಪಖಂಡವು, ಪ್ರವಾಸಿ ಮಿತ್ರನನ್ನು ನಿಯಂತ್ರಿಸುವುದಕ್ಕೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| ಖಂಡ 18 | (i) (1)ನೇ ಉಪಖಂಡವು, ಪ್ರವಾಸೋದ್ಯಮ ಮೂಲಸೌಕರ್ಯ ಮತ್ತು ಸೌಲಭ್ಯಗಳ ಅಭಿವೃದ್ಧಿ, ಉತ್ತೇಜನ, ನಡೆಸುವಿಕೆ ಮತ್ತು ನಿರ್ವಹಣೆಯಲ್ಲಿ ಖಾಸಗಿ ವಲಯದ ಹೂಡಿಕೆಗೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.<br>(ii) (2)ನೇ ಉಪಖಂಡವು, ಪ್ರವಾಸಿ ತಾಣಗಳ ಅಂಗೀಕಾರಕ್ಕೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| ಖಂಡ 19 | (1)ನೇ ಉಪಖಂಡವು, ಪ್ರವಾಸೋದ್ಯಮ ವ್ಯಾಪಾರದ ಮಾಲೀಕ ಅಥವಾ ಆಯೋಜಕನು ಸಲ್ಲಿಸಬೇಕಾದ ಅಂಕಿಅಂಶ ಮಾಹಿತಿ ಅಥವಾ ಅಂಕಿಅಂಶ ದತ್ತಾಂಶಗಳನ್ನು ಒದಗಿಸತಕ್ಕ ಅವಧಿಯ ಅಂತರಗಳು ಮತ್ತು ನಮೂನೆ ಹಾಗೂ ಸಲ್ಲಿಸಬೇಕಾದ ಪ್ರಾಧಿಕಾರ ಇವುಗಳಿಗೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| ಖಂಡ 21 | (ಇ) ಬಾಬು, ಸರ್ಕಾರವು ನೆರವೇರಿಸಬೇಕಾದ ಯಾವುದೇ ಇತರ ಕರ್ತವ್ಯಗಳಿಗೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| ಖಂಡ 23 | (3)ನೇ ಉಪಖಂಡವು, ಪ್ರವಾಸಿ ಮಿತ್ರನು ನಿರ್ವಹಿಸಬೇಕಾದ ದಿನಚರಿಗೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| ಖಂಡ 29 | (i) (1)ನೇ ಉಪಖಂಡವು, ಅಪೀಲು ಪ್ರಾಧಿಕಾರದ ನೇಮಕಕ್ಕೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.<br>(ii) (2)ನೇ ಉಪಖಂಡವು, ಅಪೀಲನ್ನು ವಲೆ ಮಾಡುವ ಪ್ರಕ್ರಿಯೆಗೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |

| | |
|---|---|
| ಖಂಡ 36 | (1)ನೇ ಉಪಖಂಡವು, ಈ ಅಧಿನಿಯಮದ ಎಲ್ಲಾ ಅಥವಾ ಯಾವುವೇ ಉದ್ದೇಶಗಳನ್ನು ಕಾರ್ಯಗತಗೊಳಿಸುವುದಕ್ಕೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| ಖಂಡ 37 | (2)ನೇ ಉಪಖಂಡವು, ನಿಯಮಿಸಲಾದ ಪ್ರಾಧಿಕಾರದ ಯಾವುದೇ ಅಥವಾ ಎಲ್ಲಾ ಪ್ರಕಾರ್ಯಗಳನ್ನು ಪ್ರತ್ಯಾಯೋಜಿಸುವುದಕ್ಕೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |

ಪ್ರಸ್ತಾವಿತ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

**ಆರ್.ವಿ. ದೇಶಪಾಂಡೆ**

ಉನ್ನತ ಶಿಕ್ಷಣ ಮತ್ತು ಪ್ರವಾಸೋದ್ಯಮ ಸಚಿವರು

**ಪಿ. ಓಂಪ್ರಕಾಶ**

ಕಾರ್ಯದರ್ಶಿ

ಕರ್ನಾಟಕ ವಿಧಾನ ಸಭೆ

## KARNATAKA LEGISLATIVE ASSEMBLY
## FOURTEENTH LEGISLATIVE ASSEMBLY
### SIXTH SESSION
### (ADJOURNED MEETINGS)
## THE KARNATAKA TOURISM TRADE (FACILITATION AND REGULATION) BILL, 2015
## (L.A. Bill No. 13 of 2015)

A Bill to facilitate and regulate tourism trade in the State.

Whereas it is expedient to provide for facilitation and regulation of tourism trade in the State of Karnataka and for the matters connected therewith or incidental thereto;

Be it enacted by the Karnataka State Legislature in the sixty sixth year of the Republic of India as follows:-

### CHAPTER I - PRELIMINARY

**1. Short title and commencement.-** (1) This Act may be called the Karnataka Tourism Trade (Facilitation and Regulation) Act, 2015.

(2) It shall come into force on such date, as far as possible not later than six months from the date of its publication in the Official Gazette, as the Government may, by notification appoint.

**2. Definitions.-** (1) In this Act, unless the context otherwise requires,-

(a) “Council" means the State tourism council constituted under section 3;

(b) “Chairperson” means the Chairperson of the Council constituted under section 3;

(c) “Government” means the State Government;

(d) “Government agency” means a Government undertaking, Local Authority or body or corporation established by or under any law and owned or controlled by the Government or any other body or authority owned or controlled by the Government, holding not less than fifty-one percent of paid-up share capital in such corporation or body;

(e) “Government tourism entities” shall include any State Government Department or Government entities responsible for or entrusted with the development and promotion of tourist destination or tourism;

(f)“Local authority” means any Gram panchayat, Town panchayat, Municipal council, Municipal corporation, development authority or other statutory authority which is a local self Government entrusted with the control or management of any area;

(g) "Malpractice" means,-

(i) touting which shall include pestering any tourist or group of tourists for availing facilities of shopping, accommodation, transportation, sightseeing or even going to the extent of harassing tourist to visit any particular premises or establishment, or tourism operator connected with tourism trade or any other establishment where tourist would like to stay or purchase something;

**Explanation.-** Any recognized, registered or bonafide tourism operator already engaged by any tourist or whose services were hired or resorted by the tourist voluntarily, when receives or contacts any

tourist at any place where tourist visits, such person while so receiving or contacting shall not be treated as a tout within the meaning of this clause;

(ii) charging a price higher than that displayed or declared;

(iii) charging remuneration higher than that fixed;

(iv) failure to display prices;

(v) failure to display tariff;

(vi) failure to give cash memo or credit memo;

(vii) failure to execute an order according to terms agreed within reasonable time after the expiry of the period for performance of the obligation;

(viii) charging tariff higher than fixed and displayed;

(ix) the receiving and paying of any monetary gratification or commission for touting, coercing or forcing the tourist;

(x) use of misleading names and logos such as palace, fort, haveli even when requisite characteristics of such places are missing; or showing of incorrect star rating of a hotel or showing names or abreviations and logos similar to those which are in existence since long and reputed as such; with the intention to attract the tourists or people at large by colourable imitation of established and reputed name of bonafide service providers or public bodies; and

(xi) any uncalled for person waiting outside any tourist place and hotel with intent to follow any tourist without his wishes;

Explanation.-For the purposes of this clause,-

(I) delay or fault in service owing to mechanical or natural failure of any system or apparatus despite due care and caution would not amount to be malpractice;

(II) inability of any service provider to perform its commitments owing to vis major or State action, shall not be treated as a malpractice;

(h) "Member" means member of the Council constituted under Section 3;

(i) "Member Secretary" means the member secretary of the Council constituted under Section 3;

(j) "Nuisance" includes any act of commission or omission or carrying on of any activity, process, operation which causes or is likely to cause injury, danger, annoyance to the sense of sight, smell or hearing or which is or may be dangerous to life or injurious to health or property;

(k) "Prescribed" means prescribed by rules made under this Act;

(l) "Prescribed Authority" means authority appointed by the Government by rules for the purpose of this Act. Different Authorities may be prescribed for different provisions of the Act;

(m) "Public Private Partnership" means an arrangement between Government or its agency on one side and a private sector participant on the other, for the provision of public assets or related services for public benefit, through investments being made by or management undertaken by the private sector participant for a specified period of time, where there is a substantial risk sharing between the Government and the private sector participant and where the private sector participant receives performance linked payments that conform to specified, pre-determined and measurable performance standards;

(n) "Regulations" means regulations made under this Act;

(o) "Tour guide" means a person who, for reward, accompanies tourists visiting any tourist destination and furnishes information or comments with regard to any matter of significance, historical, archaeological, botanical, ethnological, cultural, social or other interest with respect to such location;

(p) "Tourism trade" means and includes such class of facilities, service, activities or products relating to tourism, as may be prescribed, provided to a tourist in a premises or by any person or travel agency regularly or occasionally and includes facilities services or activities relating to tourism including medical tourism, eco tourism, rural tourism, water tourism, caravan tourism and adventure tourism or any other class of tourism by whatever name called and home stay, hotel, resort, wellness centre, visitor information centre, interpretation centre, water sports, boat house, way side amenity, dormitories as may be prescribed.

(q) "Tourism operator" in relation to a tourism trade, means any person, company, association or firm or any other body who conducts or operates a tourism trade or who is responsible for its management;

(r) "Tourist" means a person travelling to and staying in a place outside his usual place of residence for more than twenty-four hours, but not more than one consecutive year, for any purpose not being a work related activity remunerated from within the place visited;

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಶನಿವಾರ, ಮಾರ್ಚ್ ೨೮, ೨೦೧೫ (ಚೈತ್ರ ೦೭, ಶಕ ವರ್ಷ ೧೯೩೭) | ನಂ. ೨೪೩ |
|---|---|---|
| **Part – IV-A** | **Bengaluru, Saturday, March 28, 2015 (Chaithra 07, Shaka Varsha 1937)** | **No. 243** |

## PARLIAMENTARY AFFAIRS SECRETARIAT

## NOTIFICATION

### No. SAMVYASHAE 26 SHASANA 2014, Bengaluru, dated: 28.03.2015

Ordered that the translation of ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ), ಅಧಿನಿಯಮ 2014 (2015ರ ಕರ್ನಾಟಕ ಅಧಿನಿಯಮ ಸಂಖ್ಯೆ:11) in the English language, be published as authorised by the Governor of Karnataka under clause (3) of Article 348 of the constitution of India in the Karnataka Gazette for general information.

The following translation of ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ), ಅಧಿನಿಯಮ 2014 (2015ರ ಕರ್ನಾಟಕ ಅಧಿನಿಯಮ ಸಂಖ್ಯೆ:11) in the English language is published in the Official Gazette under the authority of the Governor of Karnataka under clause (3) of Article 348 of the Constitution of India.

**KARNATAKA ACT NO. 11 OF 2015**

(First Published in the Karnataka Gazette Extra-ordinary on the Twenty Eighth day of March, 2015)

**THE KARNATAKA STATE UNIVERSITIES (AMENDMENT) ACT, 2014**

(Received the assent of the Governor on the Twenty fourth day of March, 2015)

An Act further to amend the Karnataka State Universities Act, 2000.

Whereas, it is expedient further to amend the Karnataka State Universities Act, 2000 (Karnataka Act 29 of 2001) for the purposes hereinafter appearing;

Be it enacted by the Karnataka State Legislature in the Sixty fifth year of the Republic of India, as follows:-

**1. Short title and commencement.-** (1) This Act may be called the Karnataka State Universities (Amendment) Act, 2014.

(2) It shall come into force on such date as the State Government may, by notification, appoint.

**2. Amendment of section 3.-** In section 3 of the Karnataka State Universities Act, 2000 (Karnataka Act 29 of 2001) (hereinafter referred to as Principal Act), for sub-section (1A), the following shall be substituted, namely:-

"(1A) For furthering the advancement of learning and prosecution of higher education and research by women there shall be established in the State a Women University with Head Quarters at Bijapur and territorial jurisdiction including granting affiliation extending over the women colleges and other women educational institutions in the State, except Maharani Women's Science and Arts College, Bangalore, Government VHD Institute of Home Science, Bangalore, Maharani Science and Arts College, Mysore and Government First Grade College for Women's, Mysore.

Provided that, for the purpose of extending the jurisdiction of the University to the entire state an extension centre shall be established at Mandya.

Provided further that, private aided or unaided women's colleges established prior to the commencement of the Karnataka State Universities (Amendment) Act, 2014 and situated within the districts other than the districts of Bidar, Gulbarga, Yadgir, Raichur, Koppal, Bellary, Dharwad, Gadag, Haveri, Uttara Kannada, Belgaum, Bijapur and Bagalkot shall exercise option of either retaining affiliation to the previously admitted universities or to get transfer of affiliation to the Karnataka State Women University within six months from the date of commencement of the said amendment Act.

Provided also that private aided or unaided women colleges which are opted to get transferred to the Karnataka State Women University shall be deemed to have been transferred to it with effect from the date of completion of six months from the date of the commencement of the said amendment Act and the private aided or unaided women colleges which have not opted to get transfer to the Karnataka State Women University shall continue to retain their affiliation in the previous university to which they were affiliated".

**3. Amendment of section 5.-** In section 5 of the Principal Act, after sub-section (5), the following shall be inserted, namely:-

"(6) Any privilege or affiliation enjoyed from all universities established under this Act, other than the Karnataka State Women University by the Government Women Colleges, except Maharani Women's Science and Arts College, Bangalore, Government VHD Institute of Home Science, Bangalore, Maharani Science and Arts College, Mysore and Government First Grade College for Women's, Mysore prior to the date of commencement of the Karnataka State Universities (Amendment) Act, 2014 shall, immediately be deemed to be withdrawn and all such Government Women Colleges previously admitted to the privileges of, or affiliated to such universities other than Karnataka State Women University shall be deemed to be admitted to the privilege of, or affiliated to the Karnataka State Women University.

(7) Any privilege or affiliation enjoyed from all Universities established under this Act, other than the Karnataka State woman University by the private aided or unaided women colleges prior to the date of commencement of the

Karnataka State Universities (Amendment) Act, 2014 except the Private (aided or unaided) Women Colleges situated in the districts of Bidar, Gulbarga, Yadagiri, Raichur, Koppal, Bellary, Dharwad, Gadag, Haveri, Uttara Kannada, Belgaum, Bijapur and Bagalkot, which have exercised their option to get transferred to the Karnataka State Women University shall with effect from the end of sixth months from the date of the commencement of the said amendment Act, shall be deemed to have transferred to the privilege of affiliation to the Karnataka State Women University. The remaining colleges which have not opted for transfer shall continue to enjoy the privilege of affiliation to previous universities to which they were affiliated.

(8) Any new women college established either by the Government or by Private Organizations after the commencement of the Karnataka State Universities (Amendment) Act, 2014 shall be affiliated to the Karnataka State Women University".

**4. Saving as to certain examination.-** Notwithstanding anything contained in the Principal Act as amended by the Karnataka State University (Amendment) Act, 2014 or the statutes, ordinances, regulations or rules made thereunder, where immediately before the commencement of the amendment Act,-

(a) any student who was studying for a degree of any university established under the Principal Act other than the Women University in accordance with the statutes, ordinances, regulations or rules in force she may until such examination is provided by the Women University be admitted to the examination of such respective Universities and be conferred with the degrees or diplomas for which she qualifies on the result of such examination;

(b) if, any university established under the Principal Act, other than the Women University has held any examination the result of which has been published but the degrees or diplomas relating thereto have not been conferred or issued or the result of any such examination has not been published by the said Universities, then such examination shall be deemed to have been held by the respective University as the case may be.

**5. Removal of difficulties.-** If any difficulty arises in giving effect to the provisions of this Act, the State Government may, by order published in the Official Gazette, make such provisions as may appear to it necessary or expedient for the purposes of removing the difficulty:

Provided that, no such order shall be made after the expiry of the period of two years from the date of commencement of the Karnataka State Universities (Amendment) Act, 2014.

The above translation of ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ) ಅಧಿನಿಯಮ, 2014 (2015ರ ಕರ್ನಾಟಕ ಅಧಿನಿಯಮ ಸಂಖ್ಯೆ:11) be published in the Official Gazette under clause (3) of Article 348 of the Constitution of India.

**VAJUBHAI VALA**
**GOVERNOR OF KARNATAKA**
By Order and in the name of the Governor of Karnataka

**S.B. GUNJIGAVI**
Secretary to Government,
Department of Parliamentary Affairs

# ವಿಶೇಷ ರಾಜ್ಯ ಪತ್ರಿಕೆ


| | | |
|---|---|---|
| **ಭಾಗ – IV-A** | **ಬೆಂಗಳೂರು, ಶನಿವಾರ, ಮಾರ್ಚ್ ೨೮, ೨೦೧೫ (ಚೈತ್ರ ೦೭, ಶಕ ವರ್ಷ ೧೯೩೭)** | **ನಂ. ೨೪೪** |
| **Part – IV-A** | **Bengaluru, Saturday, March 28, 2015 (Chaithra 07, Shaka Varsha 1937)** | **No. 244** |


## ಸಂಸದೀಯ ವ್ಯವಹಾರಗಳ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಂವ್ಯಶಾಇ 26 ಶಾಸನ 2014, ಬೆಂಗಳೂರು, ದಿನಾಂಕ: 28.03.2015**

ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ) ವಿಧೇಯಕ, 2014– ಇದಕ್ಕೆ 2015ರ ಮಾರ್ಚ್ ತಿಂಗಳ ಇಪ್ಪತ್ನಾಲ್ಕನೇ ದಿನಾಂಕದಂದು ಘನತೆವೆತ್ತ ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2015ರ ಕರ್ನಾಟಕ ಅಧಿನಿಯಮ ಸಂಖ್ಯೆ:11 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**2015 ರ ಕರ್ನಾಟಕ ಅಧಿನಿಯಮ ಸಂಖ್ಯೆ: 11**

(2015 ರ ಮಾರ್ಚ್ ಇಪ್ಪತ್ತೆಂಟನೇ ದಿನಾಂಕದಂದು ಕರ್ನಾಟಕ ರಾಜ್ಯಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

**ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ) ಅಧಿನಿಯಮ, 2014**

(2015 ರ ಮಾರ್ಚ್ ಇಪ್ಪತ್ನಾಲ್ಕನೇ ದಿನಾಂಕದಂದು ರಾಜ್ಯಪಾಲರ ಅನುಮತಿಯನ್ನು ಪಡೆಯಲಾಗಿದೆ)

ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ ಅಧಿನಿಯಮ, 2000ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ಅಧಿನಿಯಮ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ ಅಧಿನಿಯಮ, 2000ನ್ನು (2001ರ ಕರ್ನಾಟಕ ಅಧಿನಿಯಮ 29) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೈದನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.**-(1) ಈ ಅಧಿನಿಯಮವನ್ನು ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ) ಅಧಿನಿಯಮ, 2014 ಎಂದು ಕರೆಯತಕ್ಕದ್ದು.

(2) ಇದು ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದ ಅಂಥ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. 3ನೇ ಪ್ರಕರಣದ ತಿದ್ದುಪಡಿ.**– ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ ಅಧಿನಿಯಮ, 2000ರ (2001ರ ಕರ್ನಾಟಕ ಅಧಿನಿಯಮ 29) (ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 3ನೇ ಪ್ರಕರಣದ (1ಎ) ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(1ಎ) ಮಹಿಳೆಯರು ಕಲಿಕೆಯನ್ನು ಮುಂದುವರಿಸಿ, ಉನ್ನತ ಶಿಕ್ಷಣ ಹಾಗೂ ಸಂಶೋಧನೆಯಲ್ಲಿ ಪ್ರಗತಿಯನ್ನು ಸಾಧಿಸುವುದಕ್ಕಾಗಿ, ಮಹಾರಾಣಿ ಮಹಿಳಾ ವಿಜ್ಞಾನ ಮತ್ತು ಕಲಾ ಕಾಲೇಜು, ಬೆಂಗಳೂರು, ಸರ್ಕಾರಿ ಗೃಹವಿಜ್ಞಾನ ವಿಹೆಚ್‌ಡಿ ಸಂಸ್ಥೆ, ಬೆಂಗಳೂರು, ಮಹಾರಾಣಿ ವಿಜ್ಞಾನ ಮತ್ತು ಕಲಾ ಕಾಲೇಜು, ಮೈಸೂರು ಮತ್ತು ಸರ್ಕಾರಿ ಮಹಿಳಾ ಪ್ರಥಮ ದರ್ಜೆ ಕಾಲೇಜು, ಮೈಸೂರು ಇವುಗಳನ್ನು ಹೊರತುಪಡಿಸಿ, ರಾಜ್ಯದಲ್ಲಿರುವ ಮಹಿಳಾ ಕಾಲೇಜುಗಳ ಮತ್ತು ಇತರ ಮಹಿಳಾ ಶೈಕ್ಷಣಿಕ ಸಂಸ್ಥೆಗಳ ಮೇಲೆ ಸಂಯೋಜನೆಯನ್ನು ಮಂಜೂರು ಮಾಡುವುದನ್ನು ಒಳಗೊಂಡಿರುವಂತೆ ಪ್ರಾದೇಶಿಕ ಅಧಿಕಾರವ್ಯಾಪ್ತಿಯನ್ನು ಹೊಂದಿರುವ ಹಾಗೂ ಬಿಜಾಪುರದಲ್ಲಿ ಕೇಂದ್ರ ಕಾರ್ಯಸ್ಥಾನವನ್ನು ಹೊಂದಿರುವ ಒಂದು ಮಹಿಳಾ ವಿಶ್ವವಿದ್ಯಾನಿಲಯವನ್ನು ರಾಜ್ಯದಲ್ಲಿ ಸ್ಥಾಪಿಸತಕ್ಕದ್ದು:

ಪರಂತು, ಇಡೀ ರಾಜ್ಯಕ್ಕೆ ವಿಶ್ವವಿದ್ಯಾನಿಲಯದ ಅಧಿಕಾರವ್ಯಾಪ್ತಿಯನ್ನು ವಿಸ್ತರಿಸುವ ಉದ್ದೇಶಕ್ಕಾಗಿ ಒಂದು ವಿಸ್ತರಣಾ ಕೇಂದ್ರವನ್ನು ಮಂಡ್ಯದಲ್ಲಿ ಸ್ಥಾಪಿಸತಕ್ಕದ್ದು:

ಮತ್ತು ಪರಂತು, ಬೀದರ್, ಗುಲ್ಬರ್ಗಾ, ಯಾದಗಿರಿ, ರಾಯಚೂರು, ಕೊಪ್ಪಳ, ಬಳ್ಳಾರಿ, ಧಾರವಾಡ, ಗದಗ, ಹಾವೇರಿ, ಉತ್ತರಕನ್ನಡ, ಬೆಳಗಾವಿ, ಬಿಜಾಪುರ ಮತ್ತು ಬಾಗಲಕೋಟೆ ಜಿಲ್ಲೆಗಳನ್ನು ಹೊರತುಪಡಿಸಿ ಇತರ ಜಿಲ್ಲೆಗಳೊಳಗೆ ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ) ಅಧಿನಿಯಮ, 2014ರ ಪ್ರಾರಂಭಕ್ಕೆ ಮೊದಲು ಸ್ಥಾಪಿತವಾದ ಖಾಸಗಿ ಅನುದಾನಿತ ಅಥವಾ ಅನುದಾನರಹಿತ ಮಹಿಳಾ ಕಾಲೇಜುಗಳು, ಹಿಂದೆ ಪ್ರವೇಶವನ್ನು ಪಡೆದ ವಿಶ್ವವಿದ್ಯಾನಿಲಯಗಳಲ್ಲಿ ಸಂಯೋಜನೆಯನ್ನು ಉಳಿಸಿಕೊಳ್ಳುವುದಕ್ಕಾಗಲೀ ಅಥವಾ ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯದ ಸಂಯೋಜನೆಗೆ ವರ್ಗಾವಣೆ ಪಡೆಯುವುದಕ್ಕಾಗಲೀ ಆಯ್ಕೆಯನ್ನು, ಸದರಿ ತಿದ್ದುಪಡಿ ಅಧಿನಿಯಮದ ಪ್ರಾರಂಭದ ದಿನಾಂಕದಿಂದ ಆರು ತಿಂಗಳುಗಳೊಳಗೆ ಚಲಾಯಿಸತಕ್ಕದ್ದು:

ಅಲ್ಲದೆ ಪರಂತು, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯಕ್ಕೆ ವರ್ಗಾವಣೆಯನ್ನು ಪಡೆಯುವುದಕ್ಕೆ ಆಯ್ಕೆ ಮಾಡಿದ ಖಾಸಗಿ ಅನುದಾನಿತ ಅಥವಾ ಅನುದಾನ ರಹಿತ ಮಹಿಳಾ ಕಾಲೇಜುಗಳು, ಸದರಿ ತಿದ್ದುಪಡಿ ಅಧಿನಿಯಮ ಪ್ರಾರಂಭವಾದ ದಿನಾಂಕದಿಂದ ಆರು ತಿಂಗಳು ಪೂರ್ಣವಾದ ದಿನಾಂಕದಿಂದ ಜಾರಿಗೆ ಬರುವಂತೆ ವರ್ಗಾವಣೆಗೊಂಡಿವೆಯೆಂದು ಭಾವಿಸತಕ್ಕದ್ದು ಮತ್ತು ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯಕ್ಕೆ ವರ್ಗಾವಣೆಯನ್ನು ಪಡೆಯುವುದಕ್ಕೆ ಆಯ್ಕೆ ಮಾಡಿಲ್ಲದ ಖಾಸಗಿ ಅನುದಾನಿತ ಅಥವಾ ಅನುದಾನರಹಿತ ಮಹಿಳಾ ಕಾಲೇಜುಗಳ ಸಂಯೋಜನೆಯು ಈ ಹಿಂದೆ ಅವು ಸಂಯೋಜನೆಗೊಂಡಿದ್ದ ಹಿಂದಿನ ವಿಶ್ವವಿದ್ಯಾನಿಲಯದಲ್ಲಿಯೇ ಮುಂದುವರೆಯತಕ್ಕದ್ದು.

**3. 5ನೇ ಪ್ರಕರಣದ ತಿದ್ದುಪಡಿ.**– ಮೂಲ ಅಧಿನಿಯಮದ 5ನೇ ಪ್ರಕರಣದ (5)ನೇ ಉಪಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(6) ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ) ಅಧಿನಿಯಮ, 2014ರ ಪ್ರಾರಂಭದ ದಿನಾಂಕಕ್ಕೆ ಮೊದಲು, ಮಹಾರಾಣಿ ಮಹಿಳಾ ವಿಜ್ಞಾನ ಮತ್ತು ಕಲಾ ಕಾಲೇಜು, ಬೆಂಗಳೂರು, ಸರ್ಕಾರಿ ಗೃಹವಿಜ್ಞಾನದ ವಿಎಚ್‌ಡಿ ಸಂಸ್ಥೆ, ಬೆಂಗಳೂರು, ಮಹಾರಾಣಿ ವಿಜ್ಞಾನ ಮತ್ತು ಕಲಾ ಕಾಲೇಜು, ಮೈಸೂರು ಮತ್ತು ಸರ್ಕಾರಿ ಮಹಿಳಾ ಪ್ರಥಮ ದರ್ಜೆ ಕಾಲೇಜು, ಮೈಸೂರು ಇವುಗಳನ್ನು ಹೊರತುಪಡಿಸಿ, ಈ ಅಧಿನಿಯಮದಡಿಯಲ್ಲಿ ಸ್ಥಾಪಿಸಲಾದ ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯವಲ್ಲದೆ ಇತರ ಎಲ್ಲಾ ವಿಶ್ವವಿದ್ಯಾನಿಲಯಗಳಿಂದ ಸರ್ಕಾರಿ ಮಹಿಳಾ ಕಾಲೇಜುಗಳು ಅನುಭವಿಸುತ್ತಿರುವ ಯಾವುದೇ ವಿಶೇಷಾಧಿಕಾರ ಅಥವಾ ಸಂಯೋಜನೆಯನ್ನು ತಕ್ಷಣದಿಂದಲೇ ಹಿಂತೆಗೆದುಕೊಳ್ಳಲಾಗಿದೆ ಎಂದು ಭಾವಿಸತಕ್ಕದ್ದು ಮತ್ತು ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯವಲ್ಲದೆ ಅಂಥ ಇತರ ವಿಶ್ವವಿದ್ಯಾನಿಲಯಗಳ ವಿಶೇಷಾಧಿಕಾರಕ್ಕೆ ಈ ಮೊದಲು ಪ್ರವೇಶಪಡೆದಿದ್ದ ಅಥವಾ ಸಂಯೋಜನೆಗೊಂಡಿದ್ದ ಅಂಥ ಎಲ್ಲಾ ಸರ್ಕಾರಿ ಮಹಿಳಾ ಕಾಲೇಜುಗಳು, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯದ ವಿಶೇಷಾಧಿಕಾರವನ್ನು ಪಡೆದಿದೆ ಅಥವಾ ಸಂಯೋಜನೆಗೊಂಡಿದೆ ಎಂದು ಭಾವಿಸತಕ್ಕದ್ದು.

(7) ಬೀದರ್, ಗುಲ್ಬರ್ಗ, ಯಾದಗಿರಿ, ರಾಯಚೂರು, ಕೊಪ್ಪಳ, ಬಳ್ಳಾರಿ, ಧಾರವಾಡ, ಗದಗ, ಹಾವೇರಿ, ಉತ್ತರಕನ್ನಡ, ಬೆಳಗಾವಿ, ಬಿಜಾಪುರ ಮತ್ತು ಬಾಗಲಕೋಟೆ ಜಿಲ್ಲೆಗಳಲ್ಲಿ ಇರುವ ಖಾಸಗಿ (ಅನುದಾನಿತ ಅಥವಾ ಅನುದಾನರಹಿತ) ಮಹಿಳಾ ಕಾಲೇಜುಗಳನ್ನು ಹೊರತುಪಡಿಸಿ, ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ) ಅಧಿನಿಯಮ 2014ರ ಪ್ರಾರಂಭದ ದಿನಾಂಕಕ್ಕೆ ಮೊದಲು, ಈ ಅಧಿನಿಯಮದ ಅಡಿಯಲ್ಲಿ ಸ್ಥಾಪಿತವಾದ, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯವಲ್ಲದೆ ಇತರ ಎಲ್ಲ ವಿಶ್ವವಿದ್ಯಾನಿಲಯಗಳಿಂದ ಯಾವುದೇ ವಿಶೇಷಾಧಿಕಾರ ಮತ್ತು ಸಂಯೋಜನೆಯನ್ನು ಅನುಭವಿಸುತ್ತಿರುವ, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯಕ್ಕೆ ವರ್ಗಾವಣೆ ಪಡೆಯುವುದಕ್ಕೆ ತಮ್ಮ ಆಯ್ಕೆಯನ್ನು ಚಲಾಯಿಸಿರುವ ಖಾಸಗಿ ಅನುದಾನಿತ ಅಥವಾ ಅನುದಾನರಹಿತ ಮಹಿಳಾ ಕಾಲೇಜುಗಳು ಸದರಿ ತಿದ್ದುಪಡಿ ಅಧಿನಿಯಮದ ಪ್ರಾರಂಭದ ದಿನಾಂಕದ ಆರು ತಿಂಗಳುಗಳ ಅವಧಿಯ ಮುಕ್ತಾಯದಿಂದ ಜಾರಿಗೆ ಬರುವಂತೆ ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯಕ್ಕೆ ವರ್ಗಾವಣೆಗೊಂಡಿದೆಯೆಂದು ಭಾವಿಸತಕ್ಕದ್ದು. ವರ್ಗಾವಣೆಯನ್ನು ಆಯ್ಕೆಮಾಡಿಕೊಂಡಿಲ್ಲದ ಉಳಿದ ಕಾಲೇಜುಗಳು ತಾವು ಸಂಯೋಜನೆಗೊಂಡ ಹಿಂದಿನ ವಿಶ್ವವಿದ್ಯಾನಿಲಯಗಳಲ್ಲಿ ಅನುಭವಿಸುತ್ತಿರುವ ವಿಶೇಷಾಧಿಕಾರ ಅಥವಾ ಸಂಯೋಜನೆಯು ಮುಂದುವರಿಯತಕ್ಕದ್ದು.

(8) ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ) ವಿಧೇಯಕ, 2014ರ ಪ್ರಾರಂಭದ ತರುವಾಯ ಸರ್ಕಾರವಾಗಲೀ ಅಥವಾ ಖಾಸಗಿ ಸಂಸ್ಥೆಗಳಾಗಲೀ ಸ್ಥಾಪಿಸುವ ಯಾವುದೇ ಹೊಸ ಮಹಿಳಾ ಕಾಲೇಜು ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯಕ್ಕೆ ಸಂಯೋಜನೆಗೊಳ್ಳತಕ್ಕದ್ದು."

**4. ಕೆಲವು ಪರೀಕ್ಷೆಗಳಿಗೆ ಸಂಬಂಧಿಸಿದಂತೆ ಉಳಿಸುವಿಕೆ.**– ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯ (ತಿದ್ದುಪಡಿ) ಅಧಿನಿಯಮ, 2014ರ ಮೂಲಕ ತಿದ್ದುಪಡಿಯಾದ ಮೂಲ ಅಧಿನಿಯಮದಲ್ಲಿ ಅಥವಾ ಈ ಅಧಿನಿಯಮದ ಪ್ರಾರಂಭದ ನಿಕಟಪೂರ್ವದಲ್ಲಿ ಅದರ ಅಡಿಯಲ್ಲಿ ರಚಿಸಿದ ಪರಿನಿಯಮಗಳಲ್ಲಿ, ಆರ್ಡಿನೆನ್ಸ್‌ಗಳಲ್ಲಿ, ವಿನಿಯಮಗಳಲ್ಲಿ ಅಥವಾ ನಿಯಮಗಳಲ್ಲಿ ಏನೇ ಇದ್ದರೂ,–

(ಎ) ಜಾರಿಯಲ್ಲಿದ್ದ ಪರಿನಿಯಮಗಳಿಗೆ, ಆರ್ಡಿನೆನ್ಸ್‌ಗಳಿಗೆ, ವಿನಿಯಮಗಳಿಗೆ ಅಥವಾ ನಿಯಮಗಳಿಗೆ ಅನುಸಾರವಾಗಿ, ಮೂಲ ಅಧಿನಿಯಮದ ಅಡಿಯಲ್ಲಿ ಸ್ಥಾಪಿತವಾದ ಮಹಿಳಾ ವಿಶ್ವವಿದ್ಯಾನಿಲಯವಲ್ಲದೆ ಯಾವುದೇ ವಿಶ್ವವಿದ್ಯಾನಿಲಯದ ಪದವಿಗಾಗಿ ವ್ಯಾಸಂಗ ಮಾಡುತ್ತಿರುವ ಯಾವೊಬ್ಬ

ವಿದ್ಯಾರ್ಥಿನಿಯು, ಮಹಿಳಾ ವಿಶ್ವವಿದ್ಯಾನಿಲಯವು ಅಂಥ ಪರೀಕ್ಷೆಯನ್ನು ವ್ಯವಸ್ಥೆಗೊಳಿಸುವವರೆಗೆ, ಅಂಥ ಸಂಬಂಧಪಟ್ಟ ವಿಶ್ವವಿದ್ಯಾನಿಲಯಗಳ ಪರೀಕ್ಷೆಗೆ ಪ್ರವೇಶ ನೀಡತಕ್ಕದ್ದು ಮತ್ತು ಅಂಥ ಪರೀಕ್ಷೆಯ ಫಲಿತಾಂಶದ ಆಧಾರದ ಮೇಲೆ ಅವಳು ಅರ್ಹಳಾಗುವ ಪದವಿ ಅಥವಾ ಡಿಪ್ಲೋಮಾವನ್ನು ಅವಳಿಗೆ ಪ್ರದಾನ ಮಾಡತಕ್ಕದ್ದು.

(ಬಿ) ಮೂಲ ಅಧಿನಿಯಮದಡಿ ಸ್ಥಾಪಿತವಾದ ಮಹಿಳಾ ವಿಶ್ವವಿದ್ಯಾನಿಲಯವಲ್ಲದೆ, ಯಾವುದೇ ವಿಶ್ವವಿದ್ಯಾನಿಲಯವು ಯಾವುದೇ ಪರೀಕ್ಷೆಯನ್ನು ನಡೆಸಿ ಅದರ ಫಲಿತಾಂಶವು ಪ್ರಕಟಿಸಿದ್ದು ಆದರೆ, ಅದಕ್ಕೆ ಸಂಬಂಧಪಟ್ಟ ಪದವಿ ಅಥವಾ ಡಿಪ್ಲೋಮಾವನ್ನು ಪ್ರದಾನ ಮಾಡಿರದಿದ್ದರೆ ಅಥವಾ ನೀಡಿರದಿದ್ದರೆ ಅಥವಾ ಯಾವುದೇ ಅಂಥ ಪರೀಕ್ಷೆಯ ಫಲಿತಾಂಶವನ್ನು ಸದರಿ ವಿಶ್ವವಿದ್ಯಾನಿಲಯಗಳು ಪ್ರಕಟಿಸಿರದಿದ್ದರೆ, ಆಗ ಅಂಥ ಪರೀಕ್ಷೆಯನ್ನು ಸಂದರ್ಭಾನುಸಾರವಾಗಿ ಸಂಬಂಧಿಸಿದ ವಿಶ್ವವಿದ್ಯಾನಿಲಯವೇ ನಡೆಸಿದೆ ಎಂದು ಭಾವಿಸತಕ್ಕದ್ದು.

**5. ತೊಂದರೆಗಳ ನಿವಾರಣೆ.–** ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವಲ್ಲಿ ಯಾವುದೇ ತೊಂದರೆ ಉದ್ಭವಿಸಿದರೆ, ರಾಜ್ಯ ಸರ್ಕಾರವು, ಸರ್ಕಾರಿ ರಾಜ್ಯ ಪತ್ರದಲ್ಲಿ ಆದೇಶವನ್ನು ಪ್ರಕಟಿಸುವ ಮೂಲಕ, ತೊಂದರೆಯನ್ನು ನಿವಾರಿಸುವ ಉದ್ದೇಶಕ್ಕಾಗಿ ಅವಶ್ಯವೆಂದು ಅಥವಾ ಯುಕ್ತವೆಂದು ತನಗೆ ಕಂಡುಬರಬಹುದಾದಂಥ ಉಪಬಂಧಗಳನ್ನು ರಚಿಸಬಹುದು:

ಪರಂತು, ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯ (ತಿದ್ದುಪಡಿ) ಅಧಿನಿಯಮ, 2014ರ ಪ್ರಾರಂಭದ ದಿನಾಂಕದಿಂದ ಎರಡು ವರ್ಷಗಳ ಅವಧಿಯು ಮುಕ್ತಾಯವಾದ ತರುವಾಯ ಅಂಥ ಯಾವ ಆದೇಶವನ್ನೂ ಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಬಿ. ಗುಂಜಿಗಾವಿ**

ಸರ್ಕಾರದ ಕಾರ್ಯದರ್ಶಿ

ಸಂಸದೀಯ ವ್ಯವಹಾರಗಳ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ



| ಭಾಗ – IV-A | ಬೆಂಗಳೂರು,. ಸೋಮವಾರ, ಮಾರ್ಚ್ ೩೦, ೨೦೧೫ (ಚೈತ್ರ ೦೯, ಶಕ ವರ್ಷ ೧೯೩೭) | ನಂ. ೨೫೧ |
|---|---|---|
| **Part – IV-A** | **Bengaluru, Monday, March 30, 2015 (Chaithra 09, Shaka Varsha 1937)** | **No. 251** |



## KARNATAKA LEGISLATIVE ASSEMBLY SECRETARIAT

**NOTIFICATION**

**No. KLA/LGA/14/LA Bill/2015, Bengaluru, Dated: 30-3-2015**

The following Bill was introduced in Legislative Assembly on 30-3-2015

**ಕರ್ನಾಟಕ ವಿಧಾನ ಸಭೆ**

**ಹದಿನಾಲ್ಕನೇ ವಿಧಾನ ಸಭೆ**

**ಆರನೇ ಅಧಿವೇಶನ**

**(ಮುಂದುವರೆದ ಉಪವೇಶನ)**

**ಕರ್ನಾಟಕ ಸ್ಟಾಂಪು (ಎರಡನೇ ತಿದ್ದುಪಡಿ) ವಿಧೇಯಕ, 2015**

**(2015ರ ವಿಧಾನಸಭೆಯ ವಿಧೇಯಕ ಸಂಖ್ಯೆ – 14)**

ಕರ್ನಾಟಕ ಸ್ಟಾಂಪು ಅಧಿನಿಯಮ, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನುಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಸ್ಟಾಂಪು ಅಧಿನಿಯಮ, 1957ನ್ನು (1957ರ ಕರ್ನಾಟಕ ಅಧಿನಿಯಮ 34) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತಾರನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಸ್ಟಾಂಪು (ಎರಡನೇ ತಿದ್ದುಪಡಿ) ಅಧಿನಿಯಮ, 2015 ಎಂದು ಕರೆಯತಕ್ಕದ್ದು.

(2) ಇದು ರಾಜ್ಯ ಸರ್ಕಾರವು ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆ ಮೂಲಕ ಗೊತ್ತುಪಡಿಸಬಹುದಾದ ಅಂಥ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. 9ನೇ ಪ್ರಕರಣದ ತಿದ್ದುಪಡಿ.–** ಕರ್ನಾಟಕ ಸ್ಟಾಂಪು ಅಧಿನಿಯಮ, 1957ರ (1957ರ ಕರ್ನಾಟಕ ಅಧಿನಿಯಮ 34) (ಇಲ್ಲಿ ಇನ್ನುಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 9ನೇ ಪ್ರಕರಣದ, (1)ನೇ ಉಪಪ್ರಕರಣದಲ್ಲಿ, (ಬಿ) ಖಂಡ ಮತ್ತು ಅದಕ್ಕೆ ಸಂಬಂಧಿಸಿದ ನಮೂದುಗಳಿಗೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಬಿ) ಯಾವುದೇ ನಿಗಮಿತ ಕಂಪನಿ ಅಥವಾ ಇತರ ನಿಗಮಿತ ನಿಕಾಯವು ಹೊರಡಿಸಿದ ಬಂಧಪತ್ರಗಳು ಅಥವಾ ಇತರ ಮಾರಾಟ ಮಾಡಬಹುದಾದ ಭದ್ರತಾ ಪತ್ರಗಳು, ಬ್ರೋಕರ್ಸ್ ನೋಟುಗಳು, ವಿಮಾ ಪಾಲಿಸಿಗಳು, ಸ್ವೀಕೃತಿಗಳು ಮತ್ತು ಸರ್ಕಾರವು ಕಾಲಕಾಲಕ್ಕೆ ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಲಾದ ಅಂಥ ಇತರ ಲಿಖಿತಗಳ ಸಂದರ್ಭದಲ್ಲಿ ಸುಂಕಗಳ ಬಗ್ಗೆ ರಾಜಿ ಮಾಡಿಕೊಳ್ಳಲು ಅಥವಾ ಕ್ರೋಢೀಕರಣಕ್ಕಾಗಿ ವ್ಯವಸ್ಥೆ

ಮಾಡಬಹುದು ಹಾಗೂ ರಾಜ್ಯ ಸರ್ಕಾರವು ಅಗತ್ಯವೆನಿಸಿದಲ್ಲಿ, ಅಧಿಸೂಚನೆಯ ಮೂಲಕ ಮುಖ್ಯ ನಿಯಂತ್ರಕ ಕಂದಾಯ ಪ್ರಾಧಿಕಾರಕ್ಕೆ ಅದನ್ನು ಪ್ರತ್ಯಾಯೋಜಿಸಬಹುದು."

**3. 30ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 30ನೇ ಪ್ರಕರಣದಲ್ಲಿ, (ಎಫ್) ಖಂಡ ಮತ್ತು ಅದಕ್ಕೆ ಸಂಬಂಧಪಟ್ಟ ನಮೂದುಗಳ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಜಿ) ಯಾವುದೇ ಇತರ ಸಂದರ್ಭದಲ್ಲಿ ಲಿಖಿತವನ್ನು ಹಸ್ತಾಂತರಿಸುವ ವ್ಯಕ್ತಿಯು."

**4. 30ಎ ಮತ್ತು 30ಬಿ ಪ್ರಕರಣಗಳ ಸೇರ್ಪಡೆ.–** ಮೂಲ ಅಧಿನಿಯಮದ 30ನೇ ಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"**30ಎ. ಸುಂಕವನ್ನು ಸಂದಾಯ ಮಾಡುವ, ಇರಸಾಲು ಮಾಡುವ ಮತ್ತು ವಸೂಲು ಮಾಡುವ ಹೊಣೆಗಾರಿಕೆ.–** ಸುಂಕವನ್ನು ವಿಧಿಸಬಹುದಾದ ಲಿಖಿತವನ್ನು ಯಕ್ತವಾಗಿ ಸ್ಟಾಂಪು ಮಾಡದ ಹೊರತು ಅಂಥ ಲಿಖಿತದ ಮೇಲೆ ಕ್ರಮವಹಿಸತಕ್ಕದ್ದಲ್ಲ. ಯುಕ್ತವಾಗಿ ಸ್ಟಾಂಪು ಮಾಡದಿರುವ ಯಾವೊಂದು ಲಿಖಿತವನ್ನು ಒಂದು ಸಾರ್ವಜನಿಕ ಪ್ರಾಧಿಕಾರ ಅಥವಾ ವ್ಯಕ್ತಿ ಅಥವಾ ಸಂಸ್ಥೆಯ ಮುಂದೆ ಹಾಜರುಪಡಿಸಿದಲ್ಲಿ ಅಥವಾ ಬಂದಲ್ಲಿ ಅಂಥ ಯುಕ್ತವಲ್ಲದ ಸ್ಟಾಂಪು ಮಾಡಿರುವ ಲಿಖಿತದ ಮೇಲೆ ಕ್ರಮವಹಿಸಿದ ಅಂಥ ಸಾರ್ವಜನಿಕ ಪ್ರಾಧಿಕಾರ ಅಥವಾ ವ್ಯಕ್ತಿ ಅಥವಾ ಸಂಸ್ಥೆಯು, ಯುಕ್ತವಾದ ಸ್ಟಾಂಪು ಸುಂಕವನ್ನು ಒಂದೇ ಬಾರಿಗೆ ಸಂದಾಯ ಮಾಡಲು ಹೊಣೆಗಾರನಾಗಿರತಕ್ಕದ್ದು ಮತ್ತು ಅದನ್ನು ಸರ್ಕಾರಕ್ಕೆ ಇರಸಾಲು ಮಾಡತಕ್ಕದ್ದು ಹಾಗೂ ಹಾಗೆ ಸಂದಾಯ ಮಾಡಿದ ಮತ್ತು ಇರಸಾಲು ಮಾಡಿದ ಸುಂಕದ ಮೊತ್ತವನ್ನು 30ನೇ ಪ್ರಕರಣದ ಅಡಿಯಲ್ಲಿ ಯುಕ್ತ ಸ್ಟಾಂಪು ಸುಂಕ ಒದಗಿಸುವ ಮತ್ತು ಅದರಡಿಯಲ್ಲಿ ಯುಕ್ತ ಸ್ಟಾಂಪು ಸುಂಕವನ್ನು ಸಂದಾಯ ಮಾಡದಿರುವ ವೆಚ್ಚವನ್ನು ಭರಿಸಲು ಹೊಣೆಗಾರನಾದ ವ್ಯಕ್ತಿಯಿಂದ ವಸೂಲು ಮಾಡಲು ಅರ್ಹನಾಗಿರತಕ್ಕದ್ದು.

**ವಿವರಣೆ:** "ಸಾರ್ವಜನಿಕ ಪ್ರಾಧಿಕಾರ ಅಥವಾ ವ್ಯಕ್ತಿ ಅಥವಾ ಸಂಸ್ಥೆ" ಎಂಬ ಪದಾವಳಿಗಳು ಕೇಂದ್ರ ಅಥವಾ ರಾಜ್ಯ ಸರ್ಕಾರ ಅಥವಾ ಕೇಂದ್ರ ಅಥವಾ ರಾಜ್ಯ ಸರ್ಕಾರದ ಕೈಗಾರಿಕೆ ಅಥವಾ ವಾಣಿಜ್ಯ ಸಂಸ್ಥೆ ಅಥವಾ ಜಂಟಿವಲಯದಲ್ಲಿನ ಯಾವುದೇ ಅಂಥ ಸಂಸ್ಥೆ ಅಥವಾ ಯಾವುದೇ ಬ್ಯಾಂಕು ಅಥವಾ ಬ್ಯಾಂಕೇತರ ಹಣಕಾಸು ಕಂಪನಿ, ವಸತಿ ಹಣಕಾಸು ಕಂಪನಿ ಅಥವಾ ಅಂಥದೇ ಅಥವಾ ಸಹಕಾರಿ ಬ್ಯಾಂಕು ಅಥವಾ ಸಹಕಾರಿ ಸಂಘ ಅಥವಾ ಯಾವುದೇ ಸಂಘ ಅಥವಾ ಪಾಲುದಾರಿಕೆ ಸಂಸ್ಥೆ ಅಥವಾ ಲಿಮಿಟೆಡ್ ಹೊಣೆಗಾರಿಕೆ ಪಾಲುದಾರಿಕೆ ಅಥವಾ ಸ್ಥಳೀಯ ಪ್ರಾಧಿಕಾರ ಅಥವಾ ಶಾಸನಬದ್ಧ ನಿಕಾಯ ಅಥವಾ ಸಾರ್ವಜನಿಕ ಅಥವಾ ಖಾಸಗಿ ವಿಮಾ ಕಂಪನಿ ಅಥವಾ ಯಾವುದೇ ಇತರ ಕೈಗಾರಿಕಾ ಅಥವಾ ವಾಣಿಜ್ಯ ಅಥವಾ ವ್ಯಾಪಾರಿ ಅಥವಾ ಸೇವಾ ಅಥವಾ ಹಣಕಾಸು ಸಂಸ್ಥೆ ಅಥವಾ ಫ್ರಾಂಚೈಸಿ ಅಥವಾ ಸ್ಟಾಕ್ ಎಕ್ಸ್‌ಚೇಂಜ್ ಅಥವಾ ಸಾರ್ವಜನಿಕ ಅಥವಾ ಖಾಸಗಿ ನ್ಯಾಸ ಅಥವಾ ನಿಗಮಿತವಾಗಿರುವ ಅಥವಾ ನಿಗಮಿತವಾಗದಿರುವ ಯಾವುದೇ ಇತರ ಸಂಸ್ಥೆಯೆಂದು ಅರ್ಥವನ್ನು ಹೊಂದಿರುತ್ತವೆ ಮತ್ತು ಅವುಗಳನ್ನು ಒಳಗೊಂಡಿರುತ್ತವೆ.

**30–ಬಿ. ಸಾರ್ವಜನಿಕ ಪ್ರಾಧಿಕಾರ ಅಥವಾ ವ್ಯಕ್ತಿ ಅಥವಾ ಸಂಸ್ಥೆಗಳಿಂದ ಲೆಕ್ಕಪತ್ರಗಳು/ವಿವರಪಟ್ಟಿಗಳ ನಿರ್ವಹಣೆ ಮತ್ತು ಸಲ್ಲಿಸುವಿಕೆ.–** ಸಾರ್ವಜನಿಕ ಪ್ರಾಧಿಕಾರ ಅಥವಾ ವ್ಯಕ್ತಿ ಅಥವಾ ಸಂಸ್ಥೆಯು ಲಿಖಿತಗಳ ಮೇಲೆ ಸಂದಾಯ ಮಾಡಲಾದ ಸ್ಟಾಂಪು ಸುಂಕದ ಮತ್ತು ಸರ್ಕಾರಕ್ಕೆ ಇರಸಾಲು ಮಾಡಲಾದ ಸುಂಕದ ಯುಕ್ತ ಲೆಕ್ಕಪತ್ರಗಳನ್ನು ನಿರ್ವಹಿಸತಕ್ಕದ್ದು ಮತ್ತು ಹಾಗೆ ಸಂದಾಯ ಮಾಡಿದ ಮತ್ತು ಇರಸಾಲು ಮಾಡಿದ ಸ್ಟಾಂಪು ಸುಂಕದ ದೈನಂದಿನ ತಿರುಗಣೆಯನ್ನು(scroll), ಈ ಬಗ್ಗೆ ಮಾಡಲಾದ ನಿಯಮಗಳ ಮೂಲಕ ಹೇಳಲಾದ ಪ್ರಕ್ರಿಯೆಗೆ ಅನುಸಾರವಾಗಿ ಮುಖ್ಯ ನಿಯಂತ್ರಕ ಕಂದಾಯ ಪ್ರಾಧಿಕಾರ ಅಥವಾ ಆತನಿಂದ ಪ್ರಾಧಿಕೃತನಾದ ಯಾವೊಬ್ಬ ಸಕ್ಷಮ ಅಧಿಕಾರಿಗೆ ಪ್ರತಿತಿಂಗಳು ಸಲ್ಲಿಸತಕ್ಕದ್ದು ಅಥವಾ ಅದರ ಬಗ್ಗೆ ಲೆಕ್ಕಪತ್ರಗಳು/ವಿವರಪಟ್ಟಿಗಳನ್ನು ಆನ್‌ಲೈನ್‌ನಲ್ಲಿ ದಾಖಲಿಸತಕ್ಕದ್ದು."

**5. 59–ಸಿ ಪ್ರಕರಣದ ಸೇರ್ಪಡೆ.–** ಮೂಲ ಅಧಿನಿಯಮದ 59–ಬಿ ಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"**59ಸಿ. ಸಾರ್ವಜನಿಕ ಪ್ರಾಧಿಕಾರ ಅಥವಾ ವ್ಯಕ್ತಿ ಅಥವಾ ಸಂಸ್ಥೆಯಿಂದ ಯುಕ್ತ ಸ್ಟಾಂಪು ಸುಂಕದ ವಸೂಲಾತಿ.–** ಸ್ಟಾಂಪು ಸುಂಕವನ್ನು ಸಂದಾಯಮಾಡಲು ಮತ್ತು ಇರಸಾಲು ಮಾಡಲು ಹೊಣೆಗಾರನಾದ ಸಾರ್ವಜನಿಕ ಪ್ರಾಧಿಕಾರ ಅಥವಾ ವ್ಯಕ್ತಿ ಅಥವಾ ಸಂಸ್ಥೆಯು ಹಾಗೆ ಮಾಡಲು ತಪ್ಪಿದಲ್ಲಿ, 46ನೇ ಪ್ರಕರಣದ ಅಡಿಯಲ್ಲಿ ಉಪಬಂಧಿಸಲಾದ ವಿಧಾನದಲ್ಲಿ ಅಂಥ ಸಾರ್ವಜನಿಕ ಪ್ರಾಧಿಕಾರ ಅಥವಾ ವ್ಯಕ್ತಿ ಅಥವಾ ಸಂಸ್ಥೆಯಿಂದ ಯುಕ್ತ ಸ್ಟಾಂಪು ಸುಂಕವನ್ನು ವಸೂಲಿ ಮಾಡತಕ್ಕದ್ದು."

**6. 68ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 68ನೇ ಪ್ರಕರಣದ (1)ನೇ ಉಪಪ್ರಕರಣದ (ಜಿ) ಖಂಡದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಎಚ್) 30–ಎ ಪ್ರಕರಣದ ಅಡಿಯಲ್ಲಿ ಸ್ಟಾಂಪು ಸುಂಕದ ಸಂದಾಯಕ್ಕಾಗಿ ಮತ್ತು ಇರಸಾಲು ಮಾಡುವುದನ್ನು ಮತ್ತು 30–ಬಿ ಪ್ರಕರಣದ ಅಡಿಯಲ್ಲಿ ಲೆಕ್ಕಪತ್ರಗಳು/ವಿವರಪಟ್ಟಿಕೆಗಳನ್ನು ಸಾರ್ವಜನಿಕ ಪ್ರಾಧಿಕಾರಿಗಳು ಅಥವಾ ವ್ಯಕ್ತಿಗಳು ಅಥವಾ ಸಂಸ್ಥೆಗಳು ನಿರ್ವಹಿಸುವ ಮತ್ತು ಸಲ್ಲಿಸುವ ಪ್ರಕ್ರಿಯೆಯನ್ನು ನಿಯಂತ್ರಿಸುವುದು.

(ಐ) 67 ಮತ್ತು 67–ಬಿ ಪ್ರಕರಣಗಳ ಅಡಿಯಲ್ಲಿ ವ್ಯವಹಾರ ಮತ್ತು ನಿವಾಸದ ಆವರಣಗಳಲ್ಲಿ ಲಿಖಿತಗಳನ್ನು ತಪಾಸಣೆ ಮಾಡುವ/ ಸಮೀಕ್ಷೆಗೆ ಮಾಡುವ, ಹುಡುಕುವ ಮತ್ತು ವಶಪಡಿಸಿಕೊಳ್ಳುವ ಪ್ರಕ್ರಿಯೆಯನ್ನು ನಿಯಂತ್ರಿಸುವುದು."

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

2015–16ನೇ ಆಯವ್ಯಯ ಭಾಷಣದಲ್ಲಿ ಮಾಡಲಾದ ಪ್ರಸ್ತಾವವನ್ನು ಜಾರಿಗೆ ತರುವುದಕ್ಕಾಗಿ, ಸಾರ್ವಜನಿಕ ಪ್ರಾಧಿಕಾರ, ವ್ಯಕ್ತಿ ಅಥವಾ ಸಂಸ್ಥೆಯ ಮುಂದೆ ಸಲ್ಲಿಸಲಾದ ಲಿಖಿತದ ಮೇಲೆ ಯುಕ್ತ ಸ್ಟಾಂಪು ಸುಂಕವನ್ನು ಸಂದಾಯ ಮಾಡುವ, ಇರಸಾಲು ಮಾಡುವ ಮತ್ತು ವಸೂಲು ಮಾಡುವ ಹೊಣೆಗಾರಿಕೆಯನ್ನು ಗೊತ್ತುಪಡಿಸುವುದಕ್ಕಾಗಿ ಉಪಬಂಧ ಕಲ್ಪಿಸಲು ಮತ್ತು ಸಾರ್ವಜನಿಕ ಪ್ರಾಧಿಕಾರವು ಲೆಕ್ಕಪತ್ರಗಳು/ವಿವರಪಟ್ಟಿಗಳನ್ನು ನಿರ್ವಹಿಸುವುದಕ್ಕೆ ಮತ್ತು ಸಲ್ಲಿಸುವುದಕ್ಕೆ ಉಪಬಂಧ ಕಲ್ಪಿಸಲು ಹಾಗೂ ಆನುಷಂಗಿಕ ತಿದ್ದುಪಡಿಗಳನ್ನು ಮಾಡಲು ಕರ್ನಾಟಕ ಸ್ಟಾಂಪು ಅಧಿನಿಯಮ, 1957ನ್ನು (1957ರ ಕರ್ನಾಟಕ ಅಧಿನಿಯಮ, 34) ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ವಿ. ಶ್ರೀನಿವಾಸ್ ಪ್ರಸಾದ್**
ಕಂದಾಯ ಸಚಿವರು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

**ಅನುಬಂಧ**

**ಕರ್ನಾಟಕ ಸ್ಟಾಂಪು ಅಧಿನಿಯಮ, 1957ರ**

**(1957ರ ಕರ್ನಾಟಕ ಅಧಿನಿಯಮ 34) ಉದ್ಧೃತ ಭಾಗ**

**XX XX XX**

9. **ಸುಂಕಗಳನ್ನು ಕಡಿಮೆ ಮಾಡಲು, ಮಾಫಿ ಮಾಡಲು ಅಥವಾ ಅವುಗಳ ಬಗ್ಗೆ ರಾಜಿಮಾಡಿಕೊಳ್ಳಲು ಅಧಿಕಾರ.–** (1) ರಾಜ್ಯ ಸರ್ಕಾರವು, ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಿದ ನಿಯಮ ಅಥವಾ ಆದೇಶದ ಮೂಲಕ,–

(ಎ) **XXXX XX**

(ಬಿ) ಯಾವುದೇ ನಿಗಮಿತ ಕಂಪನಿ ಅಥವಾ ಇತರ ನಿಗಮಿತ ನಿಕಾಯವು ಹೊರಡಿಸಿದ ಬಂಧಪತ್ರಗಳು ಅಥವಾ ಇತರ ಮಾರಾಟ ಮಾಡಬಹುದಾದ ಭದ್ರತಾ ಪತ್ರಗಳು ಬ್ರೋಕರ್ಸ್ ನೋಟುಗಳು, ವಿಮಾ ಪಾಲಸಿಗಳು ಮತ್ತು ಸ್ವೀಕೃತಿಗಳ ಸಂದರ್ಭದಲ್ಲಿ, ಸುಂಕಗಳ ಬಗ್ಗೆ ರಾಜಿ ಮಾಡಿಕೊಳ್ಳಲು ಅಥವಾ ಕ್ರೋಢೀಕರಣಕ್ಕಾಗಿ ವ್ಯವಸ್ಥೆ ಮಾಡಬಹುದು.

**XX XX XX**

30. **ಯಾರಿಂದ ಸುಂಕಗಳು ಸಂದಾಯವಾಗಬೇಕು.–** ತದ್ವಿರುದ್ಧವಾದ ಒಪ್ಪಂದವು ಇಲ್ಲದೇ ಇರುವಲ್ಲಿ, ಸರಿಯಾದ ಸ್ಟಾಂಪನ್ನು ಒದಗಿಸುವ ವೆಚ್ಚವನ್ನು,–

(ಎ) **XXXX XX**

(ಎಫ್) ವಿಭಜನೆಯ ಲಿಖಿತದ ಸಂದರ್ಭದಲ್ಲಿ – ವಿಭಜನೆಯಾದ ಇಡೀ ಸ್ವತ್ತಿನಲ್ಲಿ ಅವರವರ ಪಾಲುಗಳಿಗೆ ಪ್ರಮಾಣಾನುಸಾರವಾಗಿ ಅಥವಾ ಕಂದಾಯ ಪ್ರಾಧಿಕಾರಿ ಅಥವಾ ಸಿವಿಲ್ ನ್ಯಾಯಾಲಯ ಅಥವಾ ಮಧ್ಯಸ್ಥನು ಮಾಡಿದ ಆದೇಶದ ಅಮಲ್ ಜಾರಿಯಲ್ಲಿ ವಿಭಜನೆಯನ್ನು ಮಾಡಿದಾಗ ಅಂಥ ಪ್ರಾಧಿಕಾರಿ, ನ್ಯಾಯಾಲಯ ಅಥವಾ ಮಧ್ಯಸ್ಥನು ನಿರ್ದೇಶಿಸುವಂಥ ಪ್ರಮಾಣದಲ್ಲಿ ಅದಕ್ಕೆ ಪಕ್ಷಕಾರರು.

– ವಹಿಸತಕ್ಕದ್ದು,

**XX XX XX**

68. **ನಿಯಮ ರಚನಾಧಿಕಾರ.–** (1) ರಾಜ್ಯ ಸರ್ಕಾರವು ಸರ್ಕಾರಿ ರಾಜಪತ್ರದಲ್ಲಿ ಅಧಿಸೂಚನೆಯ ಮೂಲಕ, ಈ ಅಧಿನಿಯಮದ ಉದ್ದೇಶಗಳನ್ನು ಸಾಮಾನ್ಯವಾಗಿ ಈಡೇರಿಸಲು ನಿಯಮಗಳನ್ನು ರಚಿಸಬಹುದು.

(2) ವಿಶೇಷವಾಗಿ ಮತ್ತು ಹಿಂದೆ ಹೇಳಿದ ಅಧಿಕಾರದ ಸಾಮಾನ್ಯ ಅನ್ವಯಕ್ಕೆ ಬಾಧಕವಾಗದಂತೆ, ಅಂತಹ ನಿಯಮಗಳನ್ನು,–

(ಎ) **XX XX XX**

(ಜಿ) 45 ಬಿ ಪ್ರಕರಣದ ಅಡಿಯಲ್ಲಿ ಸ್ವತ್ತುಗಳ ಮಾರುಕಟ್ಟೆ ಮೌಲ್ಯ ಮಾರ್ಗದರ್ಶಿಗಳ ಅಂದಾಜು, ಪ್ರಕಟಣೆ ಮತ್ತು ಪರಿಷ್ಕರಣೆಗಾಗಿ ಪ್ರಕ್ರಿಯೆಯನ್ನು ನಿಯಂತ್ರಿಸಲು ಉಪಜಿಲ್ಲೆಗಳಲ್ಲಿ ಮತ್ತು ಜಿಲ್ಲೆಗಳಲ್ಲಿ ಕೇಂದ್ರ ಮೌಲ್ಯೀಕರಣದ ಸಮಿತಿ ಮತ್ತು ಇತರ ಉಪ ಸಮಿತಿಗಳನ್ನು ಸ್ಥಾಪಿಸಲು:

ಪರಂತು, ಅಂಥ ನಿಯಮಗಳು ಹದಿನೈದು ನಯಾ ಪೈಸೆ, ಹತ್ತು ನಯಾ ಪೈಸೆ ಅಥವಾ ಐದು ನಯಾ ಪೈಸೆಯ ಅಂಟಿಕೊಳ್ಳುವ ಸ್ಟಾಂಪುಗಳ ಮಾರಾಟವನ್ನು ನಿರ್ಬಂಧಿಸತಕ್ಕದ್ದಲ್ಲ.

**XX XX XX**

**KARNATAKA LEGISLATIVE ASSEMBLY**

**FOURTEENTH LEGISLATIVE ASSEMBLY**

**SIXTH SESSION**

**(ADJOURNED MEETINGS)**

**THE KARNATAKA STAMP (SECOND AMENDMENT) BILL 2015**

**(L.A. Bill No. 14 of 2015)**

A Bill further to amend the Karnataka Stamp Act, 1957.

Whereas it is expedient further to amend the Karnataka Stamp Act, 1957 (Karnataka Act 34 of 1957) for the purposes hereinafter appearing;

Be it enacted by the Karnataka State Legislature in the Sixty-sixth year of Republic of India as follows:-

**1. Short title and commencement.-**(1) This Act may be called the Karnataka Stamp (Second Amendment) Act, 2015.

(2) It shall come into force on such date as the State Government may by notification in the Official Gazette appoint.

**2. Amendment of section 9.-** In the Karnataka Stamp Act, 1957 (Karnataka Act 34 of 1957) (hereinafter referred to as the principal Act) in section 9, in sub-section (1), for clause (b) and entries relating thereto, the following shall be substituted, namely,-

"(b) Provide for the composition or consolidation of duties in the case of issues by any incorporated company or other body corporate or bonds or other marketable securities, brokers'notes, policies of insurance, receipts and such other instruments as specified by the Government from time to time, by notification and the State Government may if necessary by notification, delegate it to the Chief Controlling Revenue Authority".

**3. Amendment of section 30.-** In section 30 of the principal Act, after clause (f) and the entries relating thereto, the following shall be inserted, namely:-

"(g) in any other case, by the person executing the instrument."

**4. Insertion of section 30A and 30B.-** after section 30 of the principal Act, the following shall be inserted, namely,-

**"30-A. Liability to pay, remit and recover the duty.-** No instrument chargeable with duty shall be acted upon unless such instrument is duly stamped. In case a instrument is not duly stamped which is produced before or comes in the performance of functions of a public authority or person or institution, such public authority or person or institution, who has acted upon such unduly stamped instrument, shall be liable to pay at once the proper stamp duty thereon and remit the same to the government and shall be entitled to recover, the amount of duty so paid and remitted, from the person who is liable to bear the expense of providing the proper stamp duty under section 30 and has not paid the proper stamp duty, thereunder.

**Explanation:** The terms, "public authority or person or institution", shall mean and include Central or State Government or an Industrial or Commercial Institution of the Central or State Government or any such Institution in Joint Sector or any Bank or Non Banking Finance Company, Housing Finance Company or alike or a co-operative Bank or Co-operative Society or any Society or Partnership Firm or Limited Liability Partnership or Local Authority or Statutory body or Public or Private Insurance Company or any other Industrial or Commercial or Trading or Service or Financial Institution or Franchisee or Stock Exchange or Public or Private Trust or any other Institution incorporated or unincorporated.

"**30-B. Maintenance and Submission of Accounts/Returns by the public authority or person or Institutions.-** The public authority or person or institution shall maintain proper accounts of stamp duty paid on instruments and the duty remitted to the government and shall submit every month, daily scroll of stamp duty so paid and remitted or file online Accounts/Returns thereon to the Chief Controlling Revenue Authority or any competent officer authorized by him as per the procedure laid down by the rules made in this behalf".

**5. Insertion of section 59-C.-** After section 59-B of the principal Act, the following shall be inserted, namely:-

**"59C. Recovery of proper stamp duty from public authority or person or institution.-** If the public authority or person or institution liable to collect or pay and remit the stamp duty fails to do so, the proper stamp duty shall be recovered from such public authority or person or institution in the manner provided under section 46."

**6. Amendment of Section 68.-** In section 68 of the principal Act, in sub-section(1), after clause(g), the following shall be inserted, namely,-

"(h) regulating the procedure for payment and remittance of stamp duty under section 30-A and for maintenance and submission of accounts/returns under section 30-B by the public authorities or persons or institutions.

(i) regulating the procedure for inspection/survey, search and seizure of instruments in business-cum-residential premises under sections 67 and 67-B";

**STATEMENT OF OBJECTS AND REASON**

To give effect to the proposal made in the Budget speech of 2015-16, It is considered necessary to amend the Karnataka Stamp Act, 1957 (Karnataka Act 34 of 1957), to provide for fixing liability to pay, remit and recover proper stamp duty on instrument produced before public authority, person or institution and to provide for maintenance and submission of accounts/returns by public authority, person or institution and to make consequential amendments.

Hence the Bill.

**FINANCIAL MEMORANDUM**

There is no extra expenditure involved in the proposed legislative measure.

**V. SRINIVASA PRASAD**

Minister for Revenue

**P. OMPRAKASHA**

Secretary

Karnataka Legislative Assembly

**ANNEXURE**

**Extract from the Karnataka Stamp Act, 1957**

**(Karnataka Act 34 of 1957).**

**X X XX XX**

**9. Power to reduce, remit or compound duties.-** (1) The State Government may, by rule or order published in the Official Gazette,—

(a) XX XX

(b) provide for the composition or consolidation of duties in the case of issues by any incorporated company or other body corporate of bonds or other marketable securities, brokers' notes, policies of insurance and receipts.

**X X XX XX**

**30. Duties by whom payable.-** In the absence of an agreement to the contrary, the expense of providing the proper stamp shall be borne,—

(a) XX XX

(b) XX XX

(c) XX XX

(ca) XX XX

(d) XX XX

(dd) XX XX

(e) XX XX

(f) in the case of an instrument of partition—by the parties thereto in proportion to their respective shares in the whole property partitioned, or, when the partition is made in execution of an order passed by a Revenue authority or Civil Court or arbitrator, in such proportion as such authority, Court or arbitrator directs.

**X X XX XX**

**68. Powers to make rules.-** (1) The State Government may by notification in the official Gazette, make rules to carry out generally the purposes of this Act.

(2) In particular and without prejudice to the generality of the foregoing power such rules may be made for regulating,—

(a) XX XX

(b) XX XX

(c) XX XX

(d) XX XX

(e) XX XX

(f) XX XX

(g) regulating the Constitution of Central Valuation Committee and other sub-committees in the sub-districts and districts and procedure for the estimation, publication and revision of market value guidelines of properties under section 45-B:

Provided that such rules shall not restrict the sale of fifteen naye paise, ten naye paise or five naye paise adhesive stamps.

**X X** **XX** **XX**

# ವಿಶೇಷ ರಾಜ್ಯ ಪತ್ರಿಕೆ


| | | |
|---|---|---|
| ಭಾಗ – IV-A | ಬೆಂಗಳೂರು, ಸೋಮವಾರ, ಮಾರ್ಚ್ ೩೦, ೨೦೧೫ (ಚೈತ್ರ ೦೯, ಶಕ ವರ್ಷ ೧೯೩೭) | ನಂ. ೨೪೫ |
| **Part – IV-A** | **Bengaluru, Monday, March 30, 2015 (Chaithra 09, Shaka Varsha 1937)** | **No. 245** |


**ಸಂಸದೀಯ ವ್ಯವಹಾರಗಳ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 14 ಶಾಸನ 2015, ಬೆಂಗಳೂರು, ದಿನಾಂಕ: 30.03.2015**

ಕರ್ನಾಟಕ ಧನವಿನಿಯೋಗ ವಿಧೇಯಕ, 2015ಕ್ಕೆ 2015ರ ಮಾರ್ಚ್ ತಿಂಗಳ ಇಪತ್ತೆಂಟನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2015ರ ಕರ್ನಾಟಕ ಅಧಿನಿಯಮ ಸಂಖ್ಯೆ: 12 ಎಂಬುದಾಗಿ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**2015ರ ಕರ್ನಾಟಕ ಅಧಿನಿಯಮ ಸಂಖ್ಯೆ: 12**

(2015ರ ಮಾರ್ಚ್ ಮೂವತ್ತನೇ ದಿನಾಂಕದಂದು ಕರ್ನಾಟಕ ರಾಜ್ಯ ಪತ್ರದ
ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

**ಕರ್ನಾಟಕ ಧನವಿನಿಯೋಗ ಅಧಿನಿಯಮ, 2015**

(2015ರ ಮಾರ್ಚ್ ಇಪ್ಪತ್ತೆಂಟನೇ ದಿನಾಂಕದಂದು ರಾಜ್ಯಪಾಲರಿಂದ ಅನುಮತಿಯನ್ನು ಪಡೆಯಲಾಗಿದೆ)

**2014–15**ನೇ ಹಣಕಾಸು ವರ್ಷದ ಸೇವೆಗಳಿಗಾಗಿ ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಕೆಲವು ಅಧಿಕ ಮೊತ್ತಗಳ ಸಂದಾಯ ಮತ್ತು ವಿನಿಯೋಗಕ್ಕಾಗಿ ಅಧಿಕಾರ ನೀಡಲು ಒಂದು ಅಧಿನಿಯಮ.

**2014–15**ನೇ ಹಣಕಾಸು ವರ್ಷದ ಸೇವೆಗಳಿಗಾಗಿ ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಆ ಪೈಕಿಯಿಂದ ಕೆಲವು ಮೊತ್ತಗಳ ಸಂದಾಯ ಮತ್ತು ವಿನಿಯೋಗಕ್ಕಾಗಿ ಅಧಿಕಾರ ನೀಡುವುದು ಯುಕ್ತವಾಗಿರುವುದರಿಂದ :

ಇದು ಭಾರತ ಗಣರಾಜ್ಯದ ಅರವತ್ತಾರನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಕೆಳಕಂಡಂತೆ ಅಧಿನಿಯಮಿತವಾಗಲಿ.

**1. ಸಂಕ್ಷಿಪ್ತ ಹೆಸರು :** ಈ ಅಧಿನಿಯಮವನ್ನು ಕರ್ನಾಟಕ ಧನವಿನಿಯೋಗ ಅಧಿನಿಯಮ, 2015 ಎಂದು ಕರೆಯತಕ್ಕದ್ದು.

**2. ಕರ್ನಾಟಕ ರಾಜ್ಯ ಸಂಚಿತ ನಿಧಿಯಿಂದ: 2014–15**ನೇ ಹಣಕಾಸು ವರ್ಷಕ್ಕಾಗಿ **471349.86** ಲಕ್ಷ ರೂಪಾಯಿಗಳ ನೀಡಿಕೆ: ಅನುಸೂಚಿಯ 2ನೇ ಅಂಕಣದಲ್ಲಿ ನಿರ್ದಿಷ್ಟ ಪಡಿಸಲಾದ ಸೇವೆಗಳ ಸಂಬಂಧದಲ್ಲಿ 2014–15ನೇ ಹಣಕಾಸು ವರ್ಷದಲ್ಲಿ ಸಂದಾಯ ಮಾಡುವಾಗ ಒದಗಿಬರುವ ಹಲವಾರು ಖರ್ಚುಗಳನ್ನು ವಹಿಸುವುದಕ್ಕಾಗಿ ಅನುಸೂಚಿಯ 5ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಲಾಗಿರುವ **ನಾಲ್ಕು ಸಾವಿರದ ಏಳು ನೂರಾ ಹದಿಮೂರು ಕೋಟಿ ನಲವತ್ತೊಂಬತ್ತು ಲಕ್ಷ ಎಂಭತ್ತಾರು ಸಾವಿರ** ರೂಪಾಯಿಗಳು ಮೀರದಷ್ಟು ಕರ್ನಾಟಕ ರಾಜ್ಯ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಸಂದಾಯ ಮಾಡತಕ್ಕದ್ದು ಮತ್ತು ಉಪಯೋಗಿಸತಕ್ಕದ್ದು.

**3. ಧನವಿನಿಯೋಗ:** ಈ ಅಧಿನಿಯಮದ ಮೂಲಕ, ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಸಂದಾಯ ಮಾಡಲು ಮತ್ತು ಉಪಯೋಗಿಸಲು ಅಧಿಕಾರ ನೀಡಲಾದ ಮೊತ್ತಗಳನ್ನು ಸದರಿ ವರ್ಷಕ್ಕೆ ಸಂಬಂಧಪಟ್ಟಂತೆ ಅನುಸೂಚಿಯಲ್ಲಿ ತಿಳಿಸಲಾದ ಸೇವೆಗಳು ಮತ್ತು ಉದ್ದೇಶಗಳಿಗಾಗಿ ವಿನಿಯೋಗಿಸತಕ್ಕದ್ದು.

ಅನುಸೂಚಿ

(2 ಮತ್ತು 3ನೇ ಪ್ರಕರಣಗಳನ್ನು ನೋಡಿ)

(ಲಕ್ಷ ₹ ಗಳಲ್ಲಿ)

| | | | ಮೀರದ ಮೊಬಲಗು | | |
|---|---|---|---|---|---|
| ಬೇಡಿಕೆ ಸಂಖ್ಯೆ | ಸೇವೆಗಳು ಮತ್ತು ಉದ್ದೇಶಗಳು | | ವಿಧಾನಸಭೆಯಿಂದ ಪುರಸ್ಕೃತವಾದುದನ್ನು | ಸಂಚಿತ ನಿಧಿಯಿಂದ ಪ್ರಭೃತವಾದುದನ್ನು | ಒಟ್ಟು |
| 1 | 2 | | 3 | 4 | 5 |
| 01 | ಕೃಷಿ ಮತ್ತು ತೋಟಗಾರಿಕೆ | ರಾಜಸ್ವ | 57,494.80 | ... | 57,494.80 |
| | | ಬಂಡವಾಳ | 2500.00 | ... | 2500.00 |
| 02 | ಪಶುಸಂಗೋಪನೆ ಮತ್ತು ಮೀನುಗಾರಿಕೆ | ರಾಜಸ್ವ | 1,582.08 | ... | 1,582.08 |
| 03 | ಆರ್ಥಿಕ | ರಾಜಸ್ವ | 1,21,511.89 | ... | 1,21,511.89 |
| | | ಬಂಡವಾಳ | 0.01 | ... | 0.01 |
| 04 | ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ | ರಾಜಸ್ವ | 209.44 | ... | 209.44 |
| 05 | ಒಳಾಡಳಿತ ಮತ್ತು ಸಾರಿಗೆ | ರಾಜಸ್ವ | 2,780.69 | ... | 2,780.69 |
| | | ಬಂಡವಾಳ | 10,155.04 | ... | 10,155.04 |
| 07 | ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತಿ ರಾಜ್ | ರಾಜಸ್ವ | 50,477.09 | ... | 50,477.09 |
| 08 | ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ | ರಾಜಸ್ವ | 18,272.00 | ... | 18,272.00 |
| 09 | ಸಹಕಾರ | ರಾಜಸ್ವ | 38,070.00 | ... | 38,070.00 |
| | | ಬಂಡವಾಳ | 800.00 | ... | 800.00 |
| 10 | ಸಮಾಜ ಕಲ್ಯಾಣ | ರಾಜಸ್ವ | 4,679.72 | ... | 4,679.72 |
| 11 | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ | ರಾಜಸ್ವ | 7,678.04 | ... | 7,678.04 |
| | | | | ... | |
| 12 | ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವೆಗಳು | ರಾಜಸ್ವ | 942.00 | ... | 942.00 |
| 13 | ಆಹಾರ ಮತ್ತು ನಾಗರಿಕ ಸರಬರಾಜು | ರಾಜಸ್ವ | 48.50 | ... | 48.50 |
| 14 | ಕಂದಾಯ | ರಾಜಸ್ವ | 37,583.21 | ... | 37,583.21 |
| 15 | ಮಾಹಿತಿ ತಂತ್ರಜ್ಞಾನ | ರಾಜಸ್ವ | 900.00 | ... | 900.00 |
| 16 | ವಸತಿ | ರಾಜಸ್ವ | 1,754.32 | 1293.41 | 3,047.73 |
| | | ಬಂಡವಾಳ | ... | 2658.13 | 2,658.13 |

**ಅನುಸೂಚಿ**

**(2 ಮತ್ತು 3ನೇ ಪ್ರಕರಣಗಳನ್ನು ನೋಡಿ)**

**(ಲಕ್ಷ ₹ ಗಳಲ್ಲಿ)**

| | | | ಮೀರದ ಮೊಬಲಗು | | |
|---|---|---|---|---|---|
| ಬೇಡಿಕೆ ಸಂಖ್ಯೆ | ಸೇವೆಗಳು ಮತ್ತು ಉದ್ದೇಶಗಳು | | ವಿಧಾನಸಭೆಯಿಂದ ಪುರಸ್ಕೃತವಾದುದನ್ನು | ಸಂಚಿತ ನಿಧಿಯಿಂದ ಪ್ರಭೃತವಾದುದನ್ನು | ಒಟ್ಟು |
| 1 | 2 | | 3 | 4 | 5 |
| 17 | ಶಿಕ್ಷಣ | ರಾಜಸ್ವ | 982.00 | ... | 982.00 |
| | | ಬಂಡವಾಳ | 366.00 | ... | 366.00 |
| 18 | ವಾಣಿಜ್ಯ ಮತ್ತು ಕೈಗಾರಿಕೆ | ರಾಜಸ್ವ | 4,587.37 | ... | 4,587.37 |
| | | ಬಂಡವಾಳ | 4,011.29 | ... | 4,011.29 |
| 19 | ನಗರಾಭಿವೃದ್ಧಿ | ರಾಜಸ್ವ | 5.00 | ... | 5.00 |
| 20 | ಲೋಕೋಪಯೋಗಿ | ರಾಜಸ್ವ | 174.00 | ... | 174.00 |
| | | ಬಂಡವಾಳ | 50,000.00 | ... | 50,000.00 |
| 21 | ಜಲಸಂಪನ್ಮೂಲ | ರಾಜಸ್ವ | 2,677.00 | ... | 2,677.00 |
| | | ಬಂಡವಾಳ | 11.00 | 9,884.00 | 9,895.00 |
| 22 | ಆರೋಗ್ಯ ಮತ್ತು ಕುಟುಂಬ ಕಲ್ಯಾಣ | ರಾಜಸ್ವ | 9,646.48 | ... | 9,646.48 |
| | | ಬಂಡವಾಳ | 24,614.37 | ... | 24,614.37 |
| 23 | ಕಾರ್ಮಿಕ | ರಾಜಸ್ವ | 2,298.43 | ... | 2,298.43 |
| | | ಬಂಡವಾಳ | 250.00 | ... | 250.00 |
| 24 | ಇಂಧನ | ರಾಜಸ್ವ | 211.55 | ... | 211.55 |
| 25 | ಕನ್ನಡ ಮತ್ತು ಸಂಸ್ಕೃತಿ | ರಾಜಸ್ವ | 115.00 | ... | 115.00 |
| 26 | ಯೋಜನೆ, ಸಾಂಖ್ಯಿಕ, ವಿಜ್ಞಾನ ಮತ್ತು ತಂತ್ರಜ್ಞಾನ | ರಾಜಸ್ವ | 16.00 | ... | 16.00 |
| 27 | ಕಾನೂನು | ರಾಜಸ್ವ | 110.00 | ... | 110.00 |
| | **ಮೊತ್ತ** | ರಾಜಸ್ವ | **3,64,806.61** | **1,293.41** | **3,66,100.02** |
| | | ಬಂಡವಾಳ | **92,707.71** | **12,542.13** | **1,05,249.84** |
| | **ಒಟ್ಟು ಮೊತ್ತ** | | **4,57,514.32** | **13,835.54** | **4,71,349.86** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಬಿ. ಗುಂಜಿಗಾವಿ**

ಸರ್ಕಾರದ ಕಾರ್ಯದರ್ಶಿ

ಸಂಸದೀಯ ವ್ಯವಹಾರಗಳ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಮಾರ್ಚ್ ೩೦, ೨೦೧೫ (ಚೈತ್ರ ೦೯, ಶಕ ವರ್ಷ ೧೯೩೭) | ನಂ. ೨೪೬ |
|---|---|---|
| Part – IV-A | Bengaluru, Monday, March 30, 2015 (Chaithra 09, Shaka Varsha 1937) | No. 246 |


## PARLIAMENTARY SECRETARIAT

## NOTIFICATION

**No. SAMVYASHAE 14 SHASANA 2015, Bangalore, dated: 30.03.2015.**

Ordered that the translation of ಕರ್ನಾಟಕ ಧನವಿನಿಯೋಗ ಅಧಿನಿಯಮ, 2015 (2015ರ ಕರ್ನಾಟಕ ಅಧಿನಿಯಮ ಸಂಖ್ಯೆ 12) in the English language, be published as authorised by the Governor of Karnataka under clause (3) of Article 348 of the constitution of India in the Karnataka Gazette for general information.

The following translation of ಕರ್ನಾಟಕ ಧನವಿನಿಯೋಗ ಅಧಿನಿಯಮ, 2015 (2015ರ ಕರ್ನಾಟಕ ಅಧಿನಿಯಮ ಸಂಖ್ಯೆ 12) in the English language is published in the Official Gazette under the authority of the Governor of Karnataka under clause (3) of Article 348 of the Constitution of India.

## KARNATAKA ACT NO. 12 OF 2015

(First Published in the Karnataka Gazette Extra-ordinary on the Thirtieth day of March, 2015)

## THE KARNATAKA APPROPRIATION ACT, 2015

(Received the assent of the Governor on the twenty eighth day of March, 2015)

An Act to authorize payment and appropriation of certain further sums from and out of the Consolidated Fund of the State of Karnataka for the Services of the financial year **2014-15.**

Whereas it is expedient to authorize payment and appropriation of certain further sums from and out of the consolidated fund of the State for the services of the Financial Year **2014-15.**

Be it enacted by the Karnataka State Legislature in the Sixty Sixth Year of the Republic of India as follows :-

**1. Short Title :** This Act may be called the Karnataka Appropriation Act, **2015.**

**2. Issue of Rupees 471349.86** Lakhs out of the Consolidated Fund of the State of Karnataka for the Financial year **2014-15 :** From and out of the Consolidated Fund of the State of Karnataka, there may be paid and applied sums not exceeding those specified in column 5 of the Schedule amounting in the aggregate to the sum of **Four Thousand Seven Hundred and Thirteen Crores, Forty Nine Lakhs Eighty Six Thousand Rupees** towards defraying the several charges which will come in the course of payment during the Financial Year 2014-15 in respect of the services specified in column 2 of the Schedule.

**3. Appropriation :-** The sums authorized to be paid and applied from and out of the Consolidated Fund of the State by this Act shall be appropriated for the services and purposes expressed in the Schedule in relation to the said year.

## SCHEDULE

**(See Sections 2 and 3)**

**(₹. in lakhs)**

| | | | Sums not exceeding | | |
|---|---|---|---|---|---|
| **Demand No.** | **Service & Purpose** | | **voted by the Legislative Assembly** | **Charged on the consoli-dated Fund** | **Total** |
| **1** | **2** | | **3** | **4** | **5** |
| 01 | Agriculture and Horticulture | Revenue | 57,494.80 | ... | 57,494.80 |
| | | Capital | 2500.00 | ... | 2500.00 |
| 02 | Animal Husbandry and Fisheries | Revenue | 1,582.08 | ... | 1,582.08 |
| 03 | Finance | Revenue | 1,21,511.89 | ... | 1,21,511.89 |
| | | Capital | 0.01 | ... | 0.01 |
| 04 | Department of Personnel and Administrative Reforms | Revenue | 209.44 | ... | 209.44 |

| | | | Sums not exceeding | | |
|---|---|---|---|---|---|
| **Demand No.** | **Service & Purpose** | | **voted by the Legislative Assembly** | **Charged on the consoli-dated Fund** | **Total** |
| **1** | **2** | | **3** | **4** | **5** |
| 05 | Home and Transport | Revenue | 2,780.69 | ... | 2,780.69 |
| | | Capital | 10,155.04 | ... | 10,155.04 |
| 07 | Rural Development and Panchayath Raj | Revenue | 50,477.09 | ... | 50,477.09 |
| | Forest, Ecology and Environment | Revenue | 18,272.00 | ... | 18,272.00 |
| 08 | | | | | |
| | Co-operation | Revenue | 38,070.00 | ... | 38,070.00 |
| 09 | | Capital | 800.00 | ... | 800.00 |
| | Social Welfare | Revenue | 4,679.72 | ... | 4,679.72 |
| 10 | | | | | |
| | Women and Child Development | Revenue | 7,678.04 | ... | 7,678.04 |
| 11 | | | | | |
| | Information, Tourism and Youth | Revenue | 942.00 | ... | 942.00 |
| 12 | Services | | | | |
| | Food and Civil Supplies | Revenue | 48.50 | ... | 48.50 |
| 13 | | | | | |
| | Revenue | Revenue | 37,583.21 | ... | 37,583.21 |
| 14 | | | | | |
| | Information Technology | Revenue | 900.00 | ... | 900.00 |
| 15 | Housing | Revenue | 1,754.32 | 1293.41 | 3,047.73 |
| 16 | | Capital | ... | 2658.13 | 2,658.13 |

**SCHEDULE**

**(See Sections 2 and 3)**

**(₹. in lakhs)**

| | | | Sums not exceeding | | |
|---|---|---|---|---|---|
| **Demand No.** | **Service & Purpose** | | **voted by the Legislative Assembly** | **Charged on the consoli-dated Fund** | **Total** |
| **1** | **2** | | **3** | **4** | **5** |
| 17 | Education | Revenue | 982.00 | ... | 982.00 |
| | | Capital | 366.00 | ... | 366.00 |
| 18 | Commerce and Industries | Revenue | 4,587.37 | ... | 4,587.37 |
| | | Capital | 4,011.29 | ... | 4,011.29 |
| 19 | Urban Development | Revenue | 5.00 | ... | 5.00 |
| 20 | Public Works | Revenue | 174.00 | ... | 174.00 |
| | | Capital | 50,000.00 | ... | 50,000.00 |
| 21 | Water Resources | Revenue | 2,677.00 | ... | 2,677.00 |
| | | Capital | 11.00 | 9,884.00 | 9,895.00 |
| 22 | Health and Family Welfare | Revenue | 9,646.48 | ... | 9,646.48 |
| | | Capital | 24,614.37 | ... | 24,614.37 |

| | | Sums not exceeding | | |
|---|---|---|---|---|
| **Demand No.** | **Service & Purpose** | **voted by the Legislative Assembly** | **Charged on the consoli-dated Fund** | **Total** |
| **1** | **2** | **3** | **4** | **5** |
| **23** | **Labour Revenue** | **2,298.43** | **...** | **2,298.43** |
| | Capital | 250.00 | ... | 250.00 |
| 24 | Energy Revenue | 211.55 | ... | 211.55 |
| 25 | Kannada and Culture Revenue | 115.00 | ... | 115.00 |
| 26 | Planning, Statistics, Science and Technology Revenue | 16.00 | ... | 16.00 |
| 27 | Law Revenue | 110.00 | ... | 110.00 |
| | **TOTAL Revenue** | **3,64,806.61** | **1,293.41** | **3,66,100.02** |
| | **Capital** | **92,707.71** | **12,542.13** | **1,05,249.84** |
| | **Grand Total** | **4,57,514.32** | **13,835.54** | **4,71,349.86** |

The above translation of ಕರ್ನಾಟಕ ಧನವಿನಿಯೋಗ ಅಧಿನಿಯಮ, 2015 (2015ರ ಕರ್ನಾಟಕ ಅಧಿನಿಯಮ ಸಂಖ್ಯೆ:12) be published in the Official Gazette under cluase (3) of Article 348 of the Constitution of India.

**VAJUBHAI VALA**
**GOVERNOR OF KARNATAKA**

By Order and in the name of the Governor of Karnataka,

**S.B. GUNJIGAVI**
Secretary to Government
Department of Parliamentary Affairs

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A<br>**Part – IV-A** | ಬೆಂಗಳೂರು,. ಸೋಮವಾರ, ಮಾರ್ಚ್ ೩೦, ೨೦೧೫ (ಚೈತ್ರ ೦೯, ಶಕ ವರ್ಷ ೧೯೩೭)<br>**Bengaluru, Monday, March 30, 2015 (Chaithra 09, Shaka Varsha 1937)** | ನಂ. ೨೫೨<br>**No. 252** |
|---|---|---|

## KARNATAKA LEGISLATIVE ASSEMBLY SECRETARIAT

### NOTIFICATION

### No. KLA/LGA/09/LA Bill/2015, Bengaluru, Dated: 30-3-2015

The following Bill was introduced in Legislative Assembly on 30-3-2015

**ಕರ್ನಾಟಕ ವಿಧಾನ ಸಭೆ**

**ಹದಿನಾಲ್ಕನೇ ವಿಧಾನ ಸಭೆ**

**ಆರನೇ ಅಧಿವೇಶನ**

**(ಮುಂದುವರೆದ ಉಪವೇಶನ)**

**ಕರ್ನಾಟಕ ಸ್ಟಾಂಪು (ತಿದ್ದುಪಡಿ) ವಿಧೇಯಕ, 2015**

**(2015ರ ವಿಧಾನಸಭೆಯ ವಿಧೇಯಕ ಸಂಖ್ಯೆ – 09)**

ಕರ್ನಾಟಕ ಸ್ಟಾಂಪು ಅಧಿನಿಯಮ, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನುಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಸ್ಟಾಂಪು ಅಧಿನಿಯಮ, 1957ನ್ನು (1957ರ ಕರ್ನಾಟಕ ಅಧಿನಿಯಮ 34) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತಾರನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಸ್ಟಾಂಪು (ತಿದ್ದುಪಡಿ) ಅಧಿನಿಯಮ, 2015 ಎಂದು ಕರೆಯತಕ್ಕದ್ದು.

(2) ಇದು 2015ರ ಏಪ್ರಿಲ್ ಒಂದನೇ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಅನುಸೂಚಿಯ ತಿದ್ದುಪಡಿ.–** ಕರ್ನಾಟಕ ಸ್ಟಾಂಪ್ ಅಧಿನಿಯಮ, 1957ರ (1957ರ ಕರ್ನಾಟಕ ಅಧಿನಿಯಮ 34) ಅನುಸೂಚಿಯಲ್ಲಿ,–

(1) 5ನೇ ಅನುಚ್ಛೇದದಲ್ಲಿ,–

(ಎ) (ಜಿ) ಖಂಡಕ್ಕೆ ಮತ್ತು ಅದಕ್ಕೆ ಸಂಬಂಧಿಸಿದ ನಮೂದುಗಳಿಗೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಜಿ) ಚರಸ್ವತ್ತಿನ ಮಾರಾಟಕ್ಕೆ ಸಂಬಂಧಿಸಿರುವಲ್ಲಿ,–

| | |
|---|---|
| (i) ಹಸ್ತಾಂತರಣವನ್ನು ಲಿಖಿತದಲ್ಲಿ ಕೊಡದೆ ಸ್ವತ್ತಿನ ಸ್ವಾಧೀನತೆಯನ್ನು ನೀಡಿದ್ದರೆ ಅಥವಾ ನೀಡಲಾಗುವುದೆಂದು ಒಪ್ಪಿಕೊಂಡಿದ್ದರೆ. | ಪ್ರತಿಫಲದ ಶೇಕಡಾ ಎರಡು ಅಥವಾ ಸ್ವತ್ತಿನ ಮಾರುಕಟ್ಟೆ ಮೌಲ್ಯ ಯಾವುದು ಹೆಚ್ಚೋ ಅದು: ಪರಂತು, ಒಂದೇ ಸ್ವತ್ತಿನ ಸಂಬಂಧದಲ್ಲಿ ಅದೇ ಪಕ್ಷಕಾರರ ನಡುವೆ ಆದ ಮುಂಚಿನ ಕರಾರನ್ನು ರದ್ದುಪಡಿಸುವ ಪತ್ರವನ್ನು ಬರೆದುಕೊಟ್ಟಿದ್ದಲ್ಲಿ ಮತ್ತು ಅಂಥ ಕರಾರಿನ ಮೇಲೆ ಸೂಕ್ತ ಸ್ಟಾಂಪು ಶುಲ್ಕವನ್ನು ಸಂದಾಯ ಮಾಡಿದ್ದಲ್ಲಿ ಆಗ ಅಂಥ "ರದ್ದುಪಡಿಸುವ ಪತ್ರ"ದ ಮೇಲಿನ ಶುಲ್ಕವು ಐದು ನೂರು ರೂಪಾಯಿಗಳನ್ನು ಮೀರತಕ್ಕದ್ದಲ್ಲ. |
| (ii) ಸ್ವತ್ತಿನ ಸ್ವಾಧೀನತೆಯನ್ನು ನೀಡದೇ ಇದ್ದಲ್ಲಿ, | ಪ್ರತಿಫಲದ ಮೊತ್ತಕ್ಕೆ ಸಮನಾದ ಮಾರುಕಟ್ಟೆ ಮೌಲ್ಯದ ಮೇಲೆ ಇಪ್ಪತ್ತು ಸಾವಿರ ರೂಪಾಯಿಗಳ ಗರಿಷ್ಠ ಆದರೆ ಐದು ನೂರು ರೂಪಾಯಿಗಳಿಗೆ ಕಡಿಮೆ ಇಲ್ಲದುದ್ದಕ್ಕೆ ಒಳಪಟ್ಟು ಪ್ರತಿ ಒಂದು ನೂರು ರೂಪಾಯಿಗಳು ಅಥವಾ ಅದರ ಭಾಗಕ್ಕೆ ಹತ್ತು ಪೈಸೆ. |

"

(ಬಿ) (i-ಡಿ) ಖಂಡ ಮತ್ತು ಅದಕ್ಕೆ ಸಂಬಂಧಿಸಿದ ನಮೂದುಗಳ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

| | | |
|---|---|---|
| "(i–ಇ) | ಚಿಟ್ ಫಂಡ್ ಅಧಿನಿಯಮ, 1982ರ 6ನೇ ಪ್ರಕರಣದ ಅಡಿಯಲ್ಲಿ ಕರ್ನಾಟಕ ರಾಜ್ಯದಲ್ಲಿ ಲಿಖಿತವಾಗಿ ಚಿಟ್ ಒಪ್ಪಂದವನ್ನು ಮಾಡಿಕೊಂಡಲ್ಲಿ, ಚಿಟ್ ಮೌಲ್ಯವು,– | |
| | (i) ಒಂದು ಲಕ್ಷ ರೂಪಾಯಿಗಳು ಮೀರದಿದ್ದಲ್ಲಿ; | ಒಂದು ನೂರು ರೂಪಾಯಿಗಳು |
| | (ii) ಒಂದು ಲಕ್ಷ ರೂಪಾಯಿಗಳನ್ನು ಮೀರಿದ್ದು, ಆದರೆ ಐದು ಲಕ್ಷ ರೂಪಾಯಿಗಳು ಮೀರದಿದ್ದಲ್ಲಿ; | ಐದು ನೂರು ರೂಪಾಯಿಗಳು |
| | (iii) ಐದು ಲಕ್ಷ ರೂಪಾಯಿಗಳನ್ನು ಮೀರಿದಲ್ಲಿ, ಪ್ರತಿ ಎರಡು ಲಕ್ಷ ರೂಪಾಯಿಗಳು ಅಥವಾ ಅದರ ಭಾಗಕ್ಕೆ; | ಒಂದು ನೂರು ರೂಪಾಯಿಗಳು" |

(2) 6ನೇ ಅನುಚ್ಛೇದದಲ್ಲಿ,–

(ಎ) (1)ನೇ ಖಂಡ ಮತ್ತು ಅದಕ್ಕೆ ಸಂಬಂಧಿಸಿದ ನಮೂದುಗಳಿಗೆ, ವಿವರಣೆಯನ್ನು ಹೊರತುಪಡಿಸಿ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(1) ಯಾವುದೇ ರೀತಿಯ ಸ್ವತ್ತಿಗೆ (ಮಾರಾಟ ಮಾಡಬಹುದಾದ ಭದ್ರತಾ ಪತ್ರವನ್ನು ಹೊರತುಪಡಿಸಿ) ಸ್ವಾಮ್ಯವನ್ನುಂಟು ಮಾಡುವ ಅಥವಾ ಅದಕ್ಕೆ ಸಾಕ್ಷ್ಯವಾಗುವ ಸ್ವಾಮ್ಯ ಪತ್ರಗಳ ಅಥವಾ ಲಿಖಿತದ ಠೇವಣಿ, ಅಂತಹ ಠೇವಣಿಯನ್ನು ಸಾಲದ ರೂಪದಲ್ಲಿ ಕೊಟ್ಟ ಅಥವಾ ಕೊಡಬೇಕಾದ ಹಣ ಅಥವಾ ಅಸ್ತಿತ್ವದಲ್ಲಿರುವ ಅಥವಾ ಭವಿಷ್ಯ ಋಣದ ಮರುಸಂದಾಯಕ್ಕಾಗಿ ಭದ್ರತೆಯ ರೂಪದಲ್ಲಿ ಮಾಡಿರುವಲ್ಲಿ;

| | |
|---|---|
| ಬೇಡಿಕೆಯ ಮೇಲೆ ಅಂತಹ ಸಾಲ ಅಥವಾ ಋಣವನ್ನು ಒಪ್ಪಂದಕ್ಕೆ ಸಾಕ್ಷ್ಯವಾಗಿರುವ ಲಿಖಿತ ಪತ್ರದ ದಿನಾಂಕದಿಂದ ಮರುಸಂದಾಯವಾಗುವುದಿದ್ದರೆ; | |
| (i) ಸಾಲ ಅಥವಾ ಋಣದ ಮೊತ್ತವು ಹತ್ತು ಲಕ್ಷ ರೂಪಾಯಿಗಳನ್ನು ಮೀರದಿದ್ದಲ್ಲಿ; | ಐದು ನೂರು ರೂಪಾಯಿಗಳ ಕನಿಷ್ಠ ಮಿತಿಗೆ ಒಳಪಟ್ಟು ಸಾಲ ಅಥವಾ ಋಣದ ಮೊತ್ತದ ಮೇಲಿನ ಶೇ.0.1 |
| (ii) ಸಾಲ ಅಥವಾ ಋಣದ ಮೊತ್ತವು ಹತ್ತು ಲಕ್ಷ ರೂಪಾಯಿಗಳನ್ನು ಮೀರಿದಲ್ಲಿ; | ಹತ್ತು ಲಕ್ಷ ರೂಪಾಯಿಗಳ ಗರಿಷ್ಠ ಮಿತಿಗೆ ಒಳಪಟ್ಟು ಸಾಲ ಅಥವಾ ಋಣದ ಮೊತ್ತದ ಮೇಲಿನ ಶೇ.0.2. |

"

(ಬಿ) (2)ನೇ ಖಂಡ ಮತ್ತು ಅದಕ್ಕೆ ಸಂಬಂಧಿಸಿದ ನಮೂದುಗಳಿಗೆ, 2ನೇ ಅಂಕಣದಲ್ಲಿ ವಿವರಣೆಯನ್ನು ಮತ್ತು 3ನೇ ಅಂಕಣದಲ್ಲಿಯ ಪರಂತುಕವನ್ನು ಹೊರತುಪಡಿಸಿ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:-

"(2) ಚರ ಸ್ವತ್ತಿನ ಗಿರವಿ ಅಥವಾ ಒತ್ತೆಯನ್ನು ಸಾಲದ ರೂಪದಲ್ಲಿ ಕೊಟ್ಟ ಅಥವಾ ಕೊಡಬೇಕಾದ ಹಣ ಅಥವಾ ಅಸ್ತಿತ್ವದಲ್ಲಿರುವ ಅಥವಾ ಭವಿಷ್ಯದ ಋಣದ ಮರುಸಂದಾಯದ ಭದ್ರತೆಗಾಗಿ ಅಂಥ ಗಿರವಿ ಅಥವಾ ಒತ್ತೆಯನ್ನು ಮಾಡಿದಲ್ಲಿ,-

| | |
|---|---|
| ಮರು ಸಂದಾಯನೀಯವಾದ ಅಂಥ ಸಾಲ ಅಥವಾ ಋಣವು ಬೇಡಿಕೆಯ ಮೇಲೆ ಅಥವಾ ಅನ್ಯಥಾ ಸಂದಾಯವಾದಲ್ಲಿ; | |
| (i) ಸಾಲದ ಮೊತ್ತವು ಒಂದು ಲಕ್ಷ ರೂಪಾಯಿಗಳನ್ನು ಮೀರಿದ ಆದರೆ ಹತ್ತು ಲಕ್ಷ ರೂಪಾಯಿಗಳನ್ನು ಮೀರದಿದ್ದಲ್ಲಿ; | ಸಾಲ ಅಥವಾ ಋಣದ ಮೊತ್ತದ ಮೇಲಿನ ಶೇ.0.1 |
| (ii) ಸಾಲದ ಮೊತ್ತವು ಹತ್ತು ಲಕ್ಷ ರೂಪಾಯಿಗಳನ್ನು ಮೀರಿದಲ್ಲಿ | ಹತ್ತು ಲಕ್ಷ ರೂಪಾಯಿಗಳ ಗರಿಷ್ಠ ಮಿತಿಗೊಳಪಟ್ಟು ಸಾಲ ಅಥವಾ ಋಣದ ಮೊತ್ತದ ಮೇಲೆ ಶೇ.0.2. |

"

(3) 9ನೇ ಅನುಚ್ಛೇದದ 3ನೇ ಅಂಕಣದಲ್ಲಿ "ಐವತ್ತು ರೂಪಾಯಿಗಳು" ಎಂಬ ಪದಗಳಿಗೆ "ಒಂದು ನೂರು ರೂಪಾಯಿಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(4) 10ನೇ ಅನುಚ್ಛೇದದ 3ನೇ ಅಂಕಣದಲ್ಲಿ "ಪ್ರತಿ ಹತ್ತು ಲಕ್ಷ ರೂಪಾಯಿಗಳಿಗೆ ಅಥವಾ ಅದರ ಭಾಗಕ್ಕೆ ಐದು ನೂರು ರೂಪಾಯಿಗಳು" ಎಂಬ ಪದಗಳಿಗೆ "ಗರಿಷ್ಠ ಐವತ್ತು ಲಕ್ಷ ರೂಪಾಯಿಗಳಿಗೆ ಒಳಪಟ್ಟು ಪ್ರತಿ ಹತ್ತು ಲಕ್ಷ ರೂಪಾಯಿಗಳಿಗೆ ಅಥವಾ ಅದರ ಭಾಗಕ್ಕೆ ಒಂದು ಸಾವಿರ ರೂಪಾಯಿಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:-

(5) 18ನೇ ಅನುಚ್ಛೇದದ 3ನೇ ಅಂಕಣದಲ್ಲಿ "ಐವತ್ತು ರೂಪಾಯಿಗಳು" ಎಂಬ ಪದಗಳಿಗೆ "ಒಂದು ನೂರು ರೂಪಾಯಿಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(6) 19ನೇ ಅನುಚ್ಛೇದದ 3ನೇ ಅಂಕಣದಲ್ಲಿ "ಒಂದು ನೂರು ರೂಪಾಯಿಗಳು" ಎಂಬ ಪದಗಳಿಗೆ "ಎರಡು ನೂರು ರೂಪಾಯಿಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(7) 20ನೇ ಅನುಚ್ಛೇದದ 5ನೇ ಖಂಡಕ್ಕೆ ಮತ್ತು ಅದಕ್ಕೆ ಸಂಬಂಧಿಸಿದ ನಮೂದುಗಳಿಗೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:-

"(5) ಕೈಗಾರಿಕಾ ಯಂತ್ರಗಳಿಗೆ ಸಂಬಂಧಿಸಿದ ಹಸ್ತಾಂತರಣ,-

| | |
|---|---|
| (i) ಕೈಗಾರಿಕಾ ಯಂತ್ರಗಳನ್ನು ಚರ ಸ್ವತ್ತು ಎಂದು ಪರಿಗಣಿಸಿದಾಗ | ಸ್ವತ್ತಿನ ಪ್ರತಿಫಲ ಅಥವಾ ಮಾರುಕಟ್ಟೆ ಮೌಲ್ಯದ ಶೇಕಡಾ ಎರಡು ಯಾವುದು ಹೆಚ್ಚೋ ಅದು, |
| (ii) ಕೈಗಾರಿಕಾ ಯಂತ್ರಗಳನ್ನು ಸ್ಥಿರಸ್ವತ್ತು ಎಂದು ಪರಿಗಣಿಸಿದಾಗ | ಸ್ವತ್ತಿನ ಪ್ರತಿಫಲ ಅಥವಾ ಮಾರುಕಟ್ಟೆ ಮೌಲ್ಯದ ಶೇಕಡಾ ಐದು, ಯಾವುದು ಹೆಚ್ಚೋ ಅದು. |

"

(8) 32ಎ ಅನುಚ್ಛೇದದಲ್ಲಿ,-

(i) 2ನೇ ಅಂಕಣದಲ್ಲಿ "ಠೇವಣಿ ಮೂಲಕ ನೀಡಿದ" ಎಂಬ ಪದಗಳ ತರುವಾಯ "ಅಥವಾ ತಯಾರಿಕೆ, ವ್ಯಾಪಾರ, ವ್ಯವಹಾರ ಅಥವಾ ವೃತ್ತಿಗಾಗಿ ನೀಡಿದ" ಎಂಬ ಪದಗಳನ್ನು ಸೇರಿಸತಕ್ಕದ್ದು.

(ii) (ii)ನೇ ಖಂಡದ 3ನೇ ಅಂಕಣದಲ್ಲಿ "ಮುಂಗಡ ಹಣದ" ಎಂಬ ಪದಗಳಿಗೆ ಮೊದಲು "ಕನಿಷ್ಠ ಐವತ್ತು ರೂಪಾಯಿಗಳಿಗೆ ಒಳಪಟ್ಟು" ಎಂಬ ಪದಗಳನ್ನು ಸೇರಿಸತಕ್ಕದ್ದು.

(iii) (iii)ನೇ ಖಂಡದ 3ನೇ ಅಂಕಣದಲ್ಲಿ "ಮುಂಗಡ ಹಣದ" ಎಂಬ ಪದಗಳಿಗೆ ಮೊದಲು "ಕನಿಷ್ಠ ಒಂದು ನೂರು ರೂಪಾಯಿಗಳಿಗೆ ಒಳಪಟ್ಟು" ಎಂಬ ಪದಗಳನ್ನು ಸೇರಿಸತಕ್ಕದ್ದು.

(iv) (iv)ನೇ ಖಂಡದ 3ನೇ ಅಂಕಣದಲ್ಲಿ "ಮುಂಗಡ ಹಣದ" ಎಂಬ ಪದಗಳಿಗೆ ಮೊದಲು "ಕನಿಷ್ಠ ಎರಡು ನೂರು ರೂಪಾಯಿಗಳಿಗೆ ಒಳಪಟ್ಟು" ಎಂಬ ಪದಗಳನ್ನು ಸೇರಿಸತಕ್ಕದ್ದು.

(v) (v)ನೇ ಖಂಡದ 3ನೇ ಅಂಕಣದಲ್ಲಿ "ಮುಂಗಡ ಹಣದ" ಎಂಬ ಪದಗಳಿಗೆ ಮೊದಲು "ಕನಿಷ್ಠ ಮೂರು ನೂರು ರೂಪಾಯಿಗಳಿಗೆ ಒಳಪಟ್ಟು" ಎಂಬ ಪದಗಳನ್ನು ಸೇರಿಸತಕ್ಕದ್ದು.

(9) 34ನೇ ಅನುಚ್ಛೇದದ (ಡಿ) ಖಂಡ ಮತ್ತು ಅದಕ್ಕೆ ಸಂಬಂಧಿಸಿದ ನಮೂದುಗಳಿಗೆ, ವಿನಾಯಿತಿಯನ್ನು ಹೊರತುಪಡಿಸಿ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:-

"(ಡಿ) ಚರಸ್ವತ್ತಿನ ಆಧಾರಕ್ಕಾಗಿ

| | |
|---|---|
| ಸಾಲ ಅಥವಾ ಋಣವು ಬೇಡಿಕೆಯ ಮೇಲೆ ಸಂದಾಯವಾದರೆ | |
| (i) ಸಾಲದ ಮೊತ್ತವು ಹತ್ತು ಲಕ್ಷ ರೂಪಾಯಿಗಳು ಮೀರದಿರುವಲ್ಲಿ; | ಪ್ರತಿ ಹತ್ತು ಸಾವಿರ ರೂಪಾಯಿಗಳು ಅಥವಾ ಅದರ ಭಾಗಕ್ಕೆ ಹತ್ತು ರೂಪಾಯಿಗಳು. |

